ಕಾಯಕವೇ ಕೈಲಾಸ



# ಸಿದ್ಧಗಂಗಾ



**ಗೌರಿ-ಗಣೇಶ ಹಬ್ಬದ ಶುಭಾಶಯಗಳು**



ಸಂಪುಟ : ೫೯ ಸೆಪ್ಟೆಂಬರ್ ೨೦೨೩ ಸಂಚಿಕೆ : ೦೯




ಆಗಸ್ಟ್ ೧೫ ರಂದು, ಶ್ರೀಮಠದಲ್ಲಿ ಏರ್ಪಡಿಸಿದ್ದ ಸ್ವಾತಂತ್ರ್ಯ ದಿನಾಚರಣೆ ಸಮಾರಂಭ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಗೃಹಸಚಿವ ಡಾ. ಜಿ. ಪರಮೇಶ್ವರ್ ಅವರು ಧ್ವಜಾರೋಹಣ ನೆರವೇರಿಸಿದರು.



ಜುಲೈ ೨೯ ರಂದು, ಬೆಂಗಳೂರಿನ ಬಸವ ಭವನದಲ್ಲಿ ವೀರಶೈವ ಲಿಂಗಾಯತ ಮಹಾವೇದಿಕೆ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಭಾರತೀಯ ಅಂಚೆ ಇಲಾಖೆ ಹೊರತಂದಿರುವ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಿಶೇಷ ಅಂಚೆ ಲಕೋಟೆಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಪೋಸ್ಟ್ ಮಾಸ್ಟರ್ ಜನರಲ್ ಶ್ರೀ ಎಲ್.ಕೆ. ದಾಸ್, ಸಚಿವರಾದ ಶ್ರೀ ವಿನಯ ಕುಲಕರ್ಣಿ ಹಾಗೂ ವೀರಶೈವ ಲಿಂಗಾಯತ ಮಹಾವೇದಿಕೆ ಅಧ್ಯಕ್ಷರಾದ ಶ್ರೀ ಪ್ರಶಾಂತ ಕಲ್ಲೂರು ಉಪಸ್ಥಿತರಿದ್ದರು.



ಬೆಂ.ನಗರ ಜಿಲ್ಲೆ ತೋಟಗೆರೆ ಶ್ರೀ ಬಸವೇಶ್ವರ ಪ್ರೌಢಶಾಲೆಯಲ್ಲಿ ಆಯೋಜಿಸಿದ್ದ ವಿವಿಧ ಕಾರ್ಯಕ್ರಮಗಳನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ದಿವ್ಯಸಾನ್ನಿಧ್ಯದಲ್ಲಿ ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಬಸವೇಗೌಡರು, ಮಾಜಿ ಸಚಿವ ಶ್ರೀ ಬಿ. ರಾಮಚಂದ್ರೇಗೌಡರು, ಶ್ರೀಮತಿ ಕಮಲಮ್ಮನವರು ಉದ್ಯಮಿ ಶ್ರೀ ಆರ್.ಬಿ.ಎಸ್. ಚೆನ್ನಬಸವಾರಾಧ್ಯರು, ಶಾಸಕರಾದ ಶ್ರೀ ಎಸ್.ಆರ್. ವಿಶ್ವನಾಥ್‌ರವರು ಶ್ರೀ ವಿ.ರಾಮಸ್ವಾಮಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ


ಸಂಪುಟ : ೫೯ ಸೆಪ್ಟೆಂಬರ್ ೨೦೨೩ ಸಂಚಿಕೆ : ೦೯

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು
ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು
ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ
ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್
ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.
ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦
ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.
ಮೊ : 91410 36345


## ಒಳಪುಟಗಳಲ್ಲಿ ....................




ಚಂದಾ ವಿವರ: ಆಜೀವ ಸದಸ್ಯತ್ವ ರೂ. 1500/-
ವಾರ್ಷಿಕ ಚಂದಾ ರೂ. 250.00 ಬಿಡಿ ಪ್ರತಿ ರೂ. 20.00

email: siddaganganews@gmail.com


ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ





## ಸಂಪಾದಕೀಯ........

ಪ್ರತಿವರ್ಷ ಸೆಪ್ಟೆಂಬರ್ ೫ ರಂದು, ಶಿಕ್ಷಕರ ದಿನಾಚರಣೆಯನ್ನು ಆಚರಿಸುವುದರ ಮೂಲಕ ಖ್ಯಾತ ಶಿಕ್ಷಣತಜ್ಞ, ಅಂತರರಾಷ್ಟ್ರೀಯ ಖ್ಯಾತಿಯ ತತ್ತ್ವಜ್ಞಾನಿ, ದಕ್ಷ ಆಡಳಿತಗಾರ, ಮಾಜಿ ರಾಷ್ಟ್ರಪತಿ ಡಾ. ಸರ್ವಪಲ್ಲಿ ರಾಧಾಕೃಷ್ಣರವರನ್ನು ಸ್ಮರಿಸಿಕೊಳ್ಳುತ್ತಿದ್ದೇವೆ. ಅವರೊಬ್ಬ ಆದರ್ಶ ಶಿಕ್ಷಕರಾಗಿದ್ದರಲ್ಲದೆ, ಶಿಕ್ಷಕರ ಬಗ್ಗೆ ಅಪಾರವಾದ ಗೌರವನ್ನಿಟ್ಟುಕೊಂಡಿದ್ದರು. ಅವರು ತಮ್ಮ ಜೀವನದಲ್ಲಿ ಏರಿದ ಸಾಧನೆಯ ಮೆಟ್ಟಿಲುಗಳು, ಆದರ್ಶ ಮೌಲ್ಯಗಳು ಶಿಕ್ಷಕ ಸಮುದಾಯಕ್ಕೆ, ಸಮಾಜಕ್ಕೆ ದಾರಿದೀಪ. ಇಂತಹ ಮಹಾನಚೇತನವನ್ನು ನೆನಪು ಮಾಡಿಕೊಳ್ಳುವುದು ನಮ್ಮ ಕರ್ತವ್ಯವೂ ಹೌದು!

"ಭಾರತದಂತಹ ಮಹಾನ್ ಜನತಂತ್ರವಾದಿ ರಾಷ್ಟ್ರಕ್ಕೆ ಡಾ. ರಾಧಾಕೃಷ್ಣನ್‌ರವರು ಅಧ್ಯಕ್ಷರಾದುದು ತತ್ತ್ವಜ್ಞಾನಕ್ಕೆ ಸಂದ ಗೌರವವಾಗಿದೆ. ನನಗಂತೂ ಇದೊಂದು ವಿಶೇಷ ಸಂತಸದ ವಿಶಿಷ್ಟ ಸಂದರ್ಭ. ತತ್ತ್ವಜ್ಞಾನಿಗಳು ರಾಜರಾಗಬೇಕೆಂಬುದು ಪ್ಲೇಟೋ ಹಂಬಲಿಸಿದ. ಒಬ್ಬ ತತ್ತ್ವಜ್ಞಾನಿಯನ್ನು ತನ್ನ ಅಧ್ಯಕ್ಷರನ್ನಾಗಿ ಸ್ವೀಕರಿಸುವುದರ ಮೂಲಕ ಭಾರತ ಶ್ರೇಷ್ಠ ಗೌರವದ ಶ್ರೇಯಸ್ಸನ್ನು ಸಂಪಾದಿಸಿಕೊಂಡಿದೆ. ೧೯೬೨ರಲ್ಲಿ ಭಾರತದ ಅತ್ಯುನ್ನತ ಸ್ಥಾನವಾದ ರಾಷ್ಟ್ರಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ಸಂದರ್ಭದಲ್ಲಿ ವಿಶ್ವವಿಖ್ಯಾತ ಶಾಂತಿವಾದಿ ಬರ್ಟ್ರಂಡ್ ರೆಸೆಲ್ ಅವರು ಹೃದಯ ತುಂಬಿ ಹೇಳಿದ ಮಾತುಗಳು ಡಾ. ರಾಧಾಕೃಷ್ಣನ್ ಅವರ ವ್ಯಕ್ತಿತ್ವಕ್ಕೆ ಸಂದ ಗೌರವ.

ಶಿಕ್ಷಣ ಮುಖ್ಯವಾಗಿ ಒಂದು ಸಂಸ್ಕಾರ, ಸಾಧನೆ ಸಿದ್ಧಿ, ವ್ಯಕ್ತಿಯ ಅಂತರಂಗದ ಅರಿವನ್ನು, ಬಹಿರಂಗದ ಪರಿಜ್ಞಾನವನ್ನು ಕ್ರೋಢೀಕರಿಸಿ, ಪೂರ್ಣ ಜೀವನದತ್ತ ಮುನ್ನಡೆಸುವುದೇ ನಿಜವಾದ ಶಿಕ್ಷಣ. ಕ್ಷರ ಅಂದರೆ ನಾಶವಾಗುವ, ಅಕ್ಷರ ಎಂದರೆ ನಾಶವಾಗದ ವಿದ್ಯೆ ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ.

ಪ್ರಾಚೀನ ಭಾರತದ ವಿದ್ಯೆ ಮೂಲತಃ ಆಧ್ಯಾತ್ಮವಿದ್ಯೆಯಾದರೂ, ಲೌಕಿಕ ಶಿಕ್ಷಣವೂ ಅವಶ್ಯಕವೆನ್ನುವುದನ್ನು ಮರೆತಿಲ್ಲ. ಆದರೆ ಪ್ರತಿಯೊಬ್ಬ ಮಾನವನೂ ಪರಿಪೂರ್ಣವಾದ ಭಗವಂತನ ಬಂದು ಅಣುರೂಪ. ಪರಿಪೂರ್ಣ ಜ್ಞಾನದ ಒಂದು ಅಂಶವೇ ಜೀವಾತ್ಮ. ಪರಮಾತ್ಮನ ಒಂದು ಕಿಂಚಿತ್ ರೂಪ. ಪ್ರತಿಯೊಂದು ಮಗುವೂ ಸರ್ವಶಕ್ತಿ ಸಂಪನ್ನವಾದ ಒಂದು ಚೈತನ್ಯ. ಅದಕ್ಕೆ ಮುಸುಕಿರುವ ಆವರಣವನ್ನು ಸರಿಸಿರುವುದು ಶಿಕ್ಷಣದ ಗುರಿಯಾಗಬೇಕು. ಸ್ವಾಮಿ ವಿವೇಕಾನಂದರು ಹೇಳಿರುವಂತೆ "Education is the Manifestation of the perfection already within Man" ಅಂದರೆ ಮಗು ತಾನು ಆತ್ಮಸ್ವರೂಪ, ಸರ್ವಶಕ್ತಿ ಸಂಪನ್ನ ಎಂಬ ಅರಿವನ್ನು ಪಡೆಯುವಂತೆ ಮಾಡುವುದೇ ಅಕ್ಷರ ಶಿಕ್ಷಣದ ಗುರಿಯಾಗಬೇಕು, ಲೌಕಿಕ ಶಿಕ್ಷಣ ಮಾತ್ರವಲ್ಲದೆ, ನೈತಿಕ ಶಿಕ್ಷಣ, ಆತ್ಮಶಿಕ್ಷಣಕ್ಕೆ ವಿಶೇಷ ಒತ್ತುಕೊಡದೆ, ಲೋಕಪರಿಜ್ಞಾನ, ಮಾಹಿತಿ ಸಂಗ್ರಹದತ್ತ ಮಾತ್ರ ಗಮನಹರಿಸುತ್ತಿರುವುದು ವಿಷಾದದ ಸಂಗತಿ. ಪ್ರತಿಯೊಂದು ಮಗುವಿಗೆ ತನ್ನದೇ ಆದ ವ್ಯಕ್ತಿತ್ವವಿದೆ, ಒಲವಿದೆ, ವೈಶಿಷ್ಟ್ಯವಿದೆ ಎಂಬುದನ್ನು ತಿಳಿಯದೆ ಮಾಹಿತಿಗಳನ್ನು, ಹೊಸ ಹೊಸ ಸಂಗತಿಗಳನ್ನು ತುರುಕಿ 'ಬುದ್ಧಿವಂತ'ನನ್ನಾಗಿ ಮಾಡುವ ಪ್ರಯತ್ನ ಮಾಡಲಾಗುತ್ತಿದೆ. ಮಗುವಿನ ತಲೆ ಒಂದು ಖಾಲಿ ಚೀಲವೆಂದು ಭಾವಿಸಿ ಅದಕ್ಕೆ ವಿವಿಧ ಪಠ್ಯ ವಿಷಯಗಳನ್ನು ತುಂಬಿದರೆ ಮಗು ಬೆಳೆದು ಬುದ್ಧಿವಂತಿಕೆಯ ಚೀಲವಾಗಬಹುದು, ಜ್ಞಾನದ ಸಂಗ್ರಹವಾಗಬಹುದು. ಆದರೆ ಸಂಸ್ಕಾರವಂತನಾಗುವುದಿಲ್ಲ. ಆ ವಿದ್ಯಾರ್ಥಿಯಲ್ಲಿ ಅತ್ಮಪ್ರವೃತ್ತಿಯ, ನೈತಿಕ ನೆಲೆಗಟ್ಟು, ಸ್ವಯಂ ವ್ಯಕ್ತಿತ್ವ, ಸಾಮಾಜಿಕ ಪರಿಜ್ಞಾನ, ರಾಷ್ಟ್ರೀಯ ಪ್ರಜ್ಞೆ ಮೂಡಿದೆಯೆ? ಎಂದು ಯೋಚಿಸಬೇಕಾಗಿದೆ.

ವಿದ್ಯಾರ್ಥಿ ದೆಸೆಯಲ್ಲಿರುವಾಗಲೇ ಸಮಾಜದಲ್ಲಿ ಪ್ರಚಲಿತವಿರುವ ಎಲ್ಲಾ ಕಾಯಕದ ಬಗ್ಗೆ ಗೌರವ, ರಾಷ್ಟ್ರಪ್ರೇಮ, ಸಮಾಜ ಸೇವೆ, ಮಾನವೀಯ ಮೌಲ್ಯಗಳು, ಪಾಪಭೀತಿಯ ಬಗ್ಗೆ ಪ್ರಜ್ಞೆ, ತಾಯಿ-ತಂದೆಗಳು, ಗುರು-ಹಿರಿಯರ ಬಗ್ಗೆ ಭಕ್ತಿ ಗೌರವ, ಸಮಾಜದ ದುರ್ಬಲರ ಬಗ್ಗೆ ಅನುಕಂಪ, ಮುಂತಾದ ವಿಷಯಗಳನ್ನು ಕುರಿತ ಪಾಠಗಳನ್ನು ಅಳವಡಿಸಬೇಕು.

ವಿದ್ಯಾರ್ಥಿ ಹಾಗೂ ಶಿಕ್ಷಕರ ಸಂಬಂಧ ತಾಯಿ-ಮಗುವಿನ ಸಂಬಂಧದಂತಿರಬೇಕು. ಶಿಕ್ಷಣದಲ್ಲಿ ಹಣಕ್ಕಿಂತಲೂ ಪ್ರತಿಭೆ, ಮಾನವೀಯ ಮೌಲ್ಯ, ವಿದ್ಯಾರ್ಥಿಯ ಆಸಕ್ತಿ ಮುಂತಾದವುಗಳ ಆಧಾರದ ಮೇಲೆ ಉನ್ನತ ಶಿಕ್ಷಣ ದೊರೆಯುವಂತಾಗಬೇಕು. ಶಿಕ್ಷಣ ಮುಗಿಸಿದ ವ್ಯಕ್ತಿ ಸತ್ಪ್ರಜೆಯಾಗಿ ರೂಪುಗೊಂಡಿರಬೇಕು. ಶಿಕ್ಷಕರಾದವರು ತಮ್ಮ ಕರ್ತವ್ಯಕ್ಕೆ ಚ್ಯುತಿಬಾರದಂತೆ ನಿಷ್ಠೆ, ಶ್ರದ್ಧೆ, ಪ್ರಾಮಾಣಿಕತೆ ಹಾಗೂ ಬದ್ಧತೆಯಿಂದ ನಡೆದುಕೊಂಡಾಗ ಮಾತ್ರ ಒಬ್ಬ ಆದರ್ಶ ಶಿಕ್ಷಕ ಎಂಬ ಹೆಗ್ಗಳಿಕೆಗೆ ಪಾತ್ರನಾಗುತ್ತಾನೆ.

**ಸಂಪಾದಕರು**





## ಶ್ರೀವಾಣಿ

### ಧ್ಯಾನದ ಮಹತ್ವ

ಒಬ್ಬ ಗುರುಗಳು ಶಿಷ್ಯನೊಡನೆ ಅರಣ್ಯದ ಮಧ್ಯೆ ಬರುತ್ತಿದ್ದರು. ಮಧ್ಯಾಹ್ನಿಕ ಪೂಜಾ ಸಮಯವಾಯಿತು. ಸ್ನಾನಾದಿಗಳನ್ನು ಪೂರೈಸಿಕೊಂಡು ಒಂದು ಮರದಡಿ ಶಿವಧ್ಯಾನಾರೂಢರಾಗಿ ಕುಳಿತುಬಿಟ್ಟರು. ಶಿಷ್ಯನು ಅವರ ಪಕ್ಕದಲ್ಲಿಯೇ ಸೇವಾಕಾರ್ಯದಲ್ಲಿ ನಿರತನಾಗಿದ್ದನು. ಆಗ ಎದುರುಗಡೆಯಿಂದ ಒಂದು ಭಯಂಕರವಾದ ಹುಲಿ ಬಂದಿತು. ಶಿಷ್ಯ ಓಡಿಹೋಗಿ ಮರದ ಮರೆಯಲ್ಲಿ ಅವಿತುಕೊಂಡ. ಗುರುವಾದರೊ ವಿಚಲಿತರಾಗದೆ ನಿರ್ಭಯರಾಗಿ ಸ್ಥಾಣುವಿನಂತೆ ಧ್ಯಾನಾಸಕ್ತರಾಗಿ ಕುಳಿತುಬಿಟ್ಟಿದ್ದರು. ಹುಲಿ ಯಾವ ಉಪಟಳವನ್ನು ಕೊಡದೆ ತನ್ನಷ್ಟಕ್ಕೆ ತಾನು ಆ ಮಾರ್ಗದಲ್ಲಿ ಹಾದುಹೋಯಿತು. ಶಿಷ್ಯ ಸದ್ಯ ಬದುಕಿದೆನೆಂಬ ಭಾವನೆಯಿಂದ ಗುರುಗಳ ಸಮೀಪಕ್ಕೆ ಬಂದ. ಗುರುಗಳು ಧ್ಯಾನ ನಿರ್ವರ್ತಿತರಾಗಿ ಎದ್ದು ಹೊರಟರು. ಶಿಷ್ಯನೂ ಹೊರಟ. ಸ್ವಲ್ಪ ದೂರ ಹೋಗುವ ವೇಳೆಗೆ ಒಂದು ಸೊಳ್ಳೆ ಹಾರಿ ಬಂದು ಗುರುವಿನ ಮೇಲೆ ಕುಳಿತುಕೊಂಡಿತು. ಕೂಡಲೇ ತಮ್ಮ ಕೈಯಿಂದ ಅದನ್ನು ಹೊಡೆದೋಡಿಸಿದರು. ಶಿಷ್ಯನಿಗಾದರೊ ಆ ಗುರುಗಳ ಉಭಯ ವಿರುದ್ಧ ವರ್ತನೆಗಳನ್ನು ಕಂಡು ಕುತೂಹಲ ಹುಟ್ಟಿತು. ಕೇಳಿಯೇ ಬಿಟ್ಟ 'ಏನು ಗುರುಗಳೇ, ಆ ಮರದಡಿ ನೀವು ಧ್ಯಾನಕ್ಕೆಂದು ಕುಳಿತುಕೊಂಡಿದ್ದಾಗ ಎದುರಿಗೆ ಹುಲಿ ಬಂದರೂ ವಿಚಲಿತರಾಗಲಿಲ್ಲ. ಸ್ಥಾಣುವಿನಂತೆ ಕುಳಿತಿದ್ದಿರಿ. ಈಗಲಾದರೋ ಒಂದು ಸಣ್ಣ ಸೊಳ್ಳೆ ಕಚ್ಚಿದ ಮಾತ್ರಕ್ಕೆ ಅದನ್ನು ಹೊಡೆದೋಡಿಸಲು ಇಷ್ಟೊಂದು ಪ್ರಯತ್ನ ಪಡುವಿರಲ್ಲ. ಇದೇನು ನಿಮ್ಮ ವಿರುದ್ಧ ವರ್ತನೆ?"

ಆಗ ಗುರುಗಳು 'ಹಾಗಲ್ಲ ಶಿಷ್ಯ! ನಾನು ಆಗ ಧ್ಯಾನಾರೂಢನಾಗಿದ್ದೆ. ದೇವರನ್ನು ಕುರಿತು ಪ್ರಾರ್ಥನೆ ಮಾಡುತ್ತಿದ್ದೆ. ಮನಸ್ಸು ದೇವದೇವನ ಸನ್ನಿಧಿಯಲ್ಲಿ ನೆಲೆಸಿತ್ತು. ಅದರಿಂದ ಆಗ ಯಾವ ಭಯವು ಆಗಲಿಲ್ಲ. ಈಗಲಾದರೊ ಮನಸ್ಸು ಲೋಕವ್ಯವಹಾರದಲ್ಲಿ ಪ್ರವರ್ತಿಸುವುದರಿಂದ ಉಪದ್ರವಾದಿಗಳು ಅನುಭವಕ್ಕೆ ಬರುತ್ತವೆ ಎಂದರು.

- ಆದ್ದರಿಂದ ಮನಸ್ಸನ್ನು ಸ್ಥಿರೀಕರಿಸಿ, ದೇವದೇವನನ್ನು ಕುರಿತು ಪ್ರಾರ್ಥನೆ ಮಾಡುವಾಗ ಯಾವ ಬಾಹ್ಯ ಉಪಟಳದಿಂದ ಯಾವ ತೊಂದರೆಯುಂಟಾಗುವುದಿಲ್ಲ.

* * *

### ವಿಭವೇ ವಿರಕ್ತಾಃ

ಗೌತಮ ಬುದ್ಧ ಇನ್ನೂ ತರುಣ, ಚಕ್ರವರ್ತಿಯ ಮಗ. ಅಲ್ಲದೆ ಹೊಸದಾಗಿ ಮದುವೆಯಾಗಿದ್ದಾನೆ' ಚೊಚ್ಚಲ ಕೂಸು ಬೇರೆ, ಐಶ್ವರ್ಯ, ಅಧಿಕಾರ ಭೋಗ ಯಾವುದಕ್ಕೂ ಕೊರತೆ ಇಲ್ಲ. ಎಲ್ಲವೂ ಲಭ್ಯವಾಗಿದೆ. ಆದರೆ ಎಲ್ಲದರಲ್ಲೂ ಜುಗುಪ್ಸೆ ಮೂಡಿತು. ಸಾವು, ಮುಪ್ಪು, ರೋಗ, ದುಃಖದ ಸಮಸ್ಯೆಗಳು ಬೆಂಬತ್ತಿ ಕಾಡತೊಡಗಿದವು. ನಿಂತಲ್ಲಿ ಕುಂತಲ್ಲಿ ಕರುಳು ಹಿಂಡಿತ್ತಿತ್ತು. ಮಾನವನನ್ನು ಬಳಸಿರುವ ವ್ಯಥೆ "ಅದರ ಪರಿಹಾರ ಹುಡುಕುವ ಮನಸ್ಸು" ಅವನ ಬದುಕನ್ನು ಬೈರಿಗೆಯಾಗಿ ಕೊರೆಯತೊಡಗಿತು. ಸನ್ಯಾಸಿಯ ಬದುಕೊಂದೆ ಸತ್ಯದ ಅರಿವಿನ ಪರಿಹಾರ ಸೂಚನೆಯ ಸಾಧನೆಯ ಮಾರ್ಗವೆಂದು ಅರಿತು ನಟ್ಟ ನಡುರಾತ್ರಿಯಲ್ಲಿ ಇದ್ದಕ್ಕಿದ್ದ ಹಾಗೆ ಮಡದಿ, ಮಕ್ಕಳು, ತಂದೆ, ತಾಯಿ, ರಾಜ್ಯಕೋಶ ಎಲ್ಲವನ್ನೂ ತೊರೆದು ಹೊರಟ. ಸರ್ವಸಂಗ ಪರಿತ್ಯಾಗಿಯಾಗಿ ಹೊರಟ. ಯಾರು ಚಕ್ರವರ್ತಿಯ ಮಗನಾಗಿ ಮೆರೆಯಬೇಕಿತ್ತೋ, ಹಂಸತೂಲಿಕಾ ತಲ್ಪದಲ್ಲಿ ಮಲಗಬೇಕಾಗಿತ್ತೋ, ಭಕ್ಷ್ಯ ಭೋಜ್ಯಗಳನ್ನು ತಿಂದು ತೇಗಬೇಕಾಗಿತ್ತೊ ಅಂತಹ ವ್ಯಕ್ತಿ ಮನೆಬಿಟ್ಟು ಕೆಲವೇ ಘಂಟೆಗಳಲ್ಲಿ ಭಿಕ್ಷಾ ಪಾತ್ರೆ ಹಿಡಿದು ಬೀದಿ ಬೀದಿ ಅಲೆಯುತ್ತಾ ಬೈರಾಗಿಯಾಗಿ ಹೊರಟ.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಎರಡೆಂಬನ್ನಕ್ಕರ ನರಡಾಯಿತ್ತು ; ಕರಡಿ ತೊಡರಿದೆ ನೋಡಾ!**
**ಎರಡೊಂದೆಂದು ತಿಳಿಯಲು ನರಡು ಮಾಯಿತ್ತು ; ಕರಡಿ ಬಿಟ್ಟೋಡಿತ್ತು ನೋಡಾ!**
**ಕಾಣಬಹುದು ಶೂನ್ಯ ನಿರಾಳ ತಾನು ತಾನೆಂಬುದು**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ ॥**

ಎರಡೆಂಬನ್ನಕ್ಕರ – ಅಂಗ ಬೇರೆ ಲಿಂಗ ಬೇರೆ ಎಂದು ಹೇಳುವ ಪರಿಯಂತರ; ನರಡಾಯಿತ್ತು – ಭವರೋಗವೆಂಬ ರುಜೆಯು ಉಂಟಾಯಿತ್ತು; ಕರಡಿ – ಮಾಯಾಶಕ್ತಿಯೆಂಬ ಭಲ್ಲುಕನು; ತೊಡರಿದೆ – ತೊಡರು ಬಂಧನಯೆಂದು ಬಂಧಿಸಿಕೊಂಡಿದೆ; ನೋಡಾ – ಕಂಡಾ; ಎರಡನೊಂದೆಂದು – ಎರಡು ಒಂದೇ ಎಂದು; ತಿಳಿಯಲು – ಅರಿಯಲು; ನರಡು – ಭವರೋಗವೆಂಬ ರುಜೆಯು; ಮಾಯಿತ್ತು ನಷ್ಟವಾಯಿತ್ತು; ಕರಡಿ – ಮಾಯಾಶಕ್ತಿಯೆಂಬ ಭಲ್ಲುಕನು ; ಬಿಟ್ಟು – ಬಿಟ್ಟುಕೊಟ್ಟು; ಓಡಿತ್ತು – (ಓಡು ಪಲಾಯನ ವೆಂದು) ಪಲಾಯನವಾಯಿತ್ತು; ನೋಡಾ–ಕಂಡಾ; ಕಾಣಬಹುದು–ಅರಿಯಬಹುದು. ಶೂನ್ಯ –ಶೂನ್ಯಬ್ರಹ್ಮವು; ನಿರಾಳ – ನಿಷ್ಕಲ ಬ್ರಹ್ಮವು; ತಾನು ತಾನೆಂಬುದು – ಬ್ರಹ್ಮದಲ್ಲಿ ಕೂಡಿ ತಾನೇ ಬ್ರಹ್ಮ ಬ್ರಹ್ಮವೇ ತಾನೆಂಬುದು; ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸಂಸಾರ ಯೋಗವ ಶಿವಯೋಗಗೊಳಿಪನು
ಹಂಸಕ್ಷೀರ ತೆರದಿ ಶರಣನು । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನುಭಾವಗಮ್ಯವೆ ಅರಿವಿನ ವಿಶ್ರಾಮವೆ
ಭಾವದ ಬಯಕೆಯ ನಿಜ ನಿಲವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಿಣಾಮದ ಮೇರುವೆ ಮನದಸಿರಿಮಹಿಮವೆ
ನಾನು ಸೀಮೆಯಗೆದ್ದಸಿರಿಚೆಲುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಉರಿಯುಂಡ ಕರ್ಪೂರವೆ ಶಬ್ದಮುಗ್ಧ ಚೆಲುವೆ
ಘನಕೆ ಘನವಾಗಿ ಅರಳಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೊಮ್ಮವನು ಅರಿದರೆ ಸುಮ್ಮನಿರಬೇಕೆಂಬ
ಬೆಳಗಿನ ಬೆಳಗಿರುವ ಮಹಿಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತ್ರಿವಿಧಿಯ ಮೀರಿದ ಅನುಭಾವ ಶಿವಸಿರಿಯೆ
ಗುರುಲಿಂಗಜಂಗಮ ಮೇರುವೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನೊಲಿದು ತೆರೆದಿರುವ ತಾಂತ್ರಿಕ ಜ್ಞಾನಾಲಯವು
ದೇಶ ವಿದೇಶದಲಿ ಹೆಸರಾಯ್ತು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರಸಿ ಆಶೀರ್ವದಿಸು ಶಿರಬಾಗಿ ನಮಿಪೆವು
ತವ ಸ್ಮರಣೆಯನೆಂದು ಬಿಡದಿಹೆವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಯುಗದ ಸಿರಿಯಾಗಿರುವೆ ಜಗದ ಸಿರಿಯಾಗಿರುವೆ
ಯುಗದಜಗದಸಿರಿಯಾಗಿ ಅರಳಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಯಲ ದೇಹಿದ ನೀನು ಬಯಲಾತ್ಮಸಿರಿ ನೀನು
ಬಯಲ ಭಾವದ ಶಿವಕೃಷಿಕ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



ಚಿಂತನೆ

## ಪಕ್ಕವಿಲ್ಲದ ಹಕ್ಕಿ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು

ನಮಗೆ ಕಾಣುವ ಜಗತ್ತು ದರ್ಶನಕ್ಕೆ ವಿಷಯ. ಆದ್ದರಿಂದ ಇದು ದೃಶ್ಯ. ಪ್ರಕೃತಿಯ ಅನಂತವಾದ ವಿಸ್ತಾರ ಇದು. ಇದರಲ್ಲಿ ಸ್ಥೂಲ ವಸ್ತುಗಳು ಇವೆ. ಅತ್ಯಂತ ಸೂಕ್ಷ್ಮ ವಸ್ತುಗಳು ಇವೆ. ಮನುಷ್ಯನ ಮತಿ ಸ್ಥೂಲ ವಸ್ತುವನ್ನು ಗ್ರಹಿಸುವ ಹಾಗೆ ಅತಿ ಸೂಕ್ಷ್ಮ ವಸ್ತುವನ್ನು ಗ್ರಹಿಸುತ್ತದೆ. ಪ್ರಕೃತಿಯ ಸಮಸ್ತ ಹರವನ್ನು ಮಾನವೀಯ ಮತಿ ಅಳೆಯ ಬಲ್ಲದು. ಆದ್ದರಿಂದ ಈ ಜಗತ್ತಿಗೆಲ್ಲ ದೃಶ್ಯ ಎನ್ನಬೇಕು. ಮತಿಗೆ ಇದು ದೃಶ್ಯ. ಈ ದೃಶ್ಯ ವಸ್ತುವನ್ನು ಯಥಾವತ್ತಾಗಿ ಕಂಡರೆ ನಮಗೆ ಸತ್ಯದರ್ಶನ ಆಯಿತು ಎಂದರ್ಥ. ಹೇಗಿದೆ ಹಾಗೆ ಕಂಡರೆ ಸತ್ಯದರ್ಶನ! ಕಣ್ಣಿನಿಂದ ಹಾಗೂ ಬುದ್ಧಿಯಿಂದ ಎಷ್ಟು ನೋಡಲು ಸಾಧ್ಯವೋ ಅದು ಎಲ್ಲವೂ ದೃಶ್ಯ! ಅಧಿಗಮ್ಯ! ಇಂತಹ ಗಮ್ಯ ವಸ್ತುವಿನ ಜ್ಞಾನ ಗಮ್ಯ ಜ್ಞಾನ. ಈ ಜ್ಞಾನವೇ ಪ್ರೇಮಾ ಯಥಾರ್ಥ, ಸತ್ಯಜ್ಞಾನ.

ಈ ಪ್ರಕೃತಿಯನ್ನು ಮೀರಿದ ಅಂದರೆ ಎಲ್ಲಿ ಪ್ರಾಕೃತಿಕ ವಿಕಾರಗಳಿಲ್ಲವೋ, ವಿಕಾಸಗಳಿಲ್ಲವೋ ಗುಣಗಳ ವ್ಯಾಪ್ತಿ ಇಲ್ಲವೋ ಇಂಥ ಕ್ಷೇತ್ರ ಅಗಮ್ಯ ಕ್ಷೇತ್ರ. ಅದು ಅದೃಶ್ಯ. ಅಲ್ಲಿ ಕಣ್ಣಿಗೆ ಪ್ರವೇಶ ಇಲ್ಲ; ಸಾಮಾನ್ಯ ಮತಿಗೆ ಪ್ರವೇಶವಿಲ್ಲ. ಅದು ಋತ. ಎಲ್ಲಿ ಮತಿ ಪ್ರವೇಶಿಸುತ್ತದೆ, ಆ ಸತ್ಯ ವಸ್ತುವಿಗೆ 'ಸತ್ಯ' ಎನಬೇಕು. ಇದೂ ಸತ್ಯವೇ, ಅದೂ ಸತ್ಯವೇ, ಆದರೆ ಇದು ಗಮ್ಯ ಸತ್ಯ; ಅದು ಅಗಮ್ಯ ಸತ್ಯ. ಕಣ್ಣು ಸ್ಪರ್ಶಮಾಡಿ ಅದನ್ನು ದೃಶ್ಯಗೊಳಿಸಿಲ್ಲ. ಮತಿ ಸ್ಪರ್ಶ ಮಾಡಿ ಅದನ್ನು ಗಮ್ಯಗೊಳಿಸಿಲ್ಲ. ಅಷ್ಟು ಶುದ್ಧವಾಗಿರುವ ಸತ್ಯ ಋತ. ಅದರ ಜ್ಞಾನ ಋತಜ್ಞಾನ.

ಜಗತ್ತಿನ ಜ್ಞಾನ ಸತ್ಯಜ್ಞಾನ. ಇದನ್ನು ಪರಿಶೀಲಿಸಲು ಶಕ್ಯ. ಅಳೆಯಲು ಶಕ್ಯ. ಆದರೆ ಋತಜ್ಞಾನವನ್ನು ಪರಿಶೀಲಿಸಲಿಕ್ಕೆ ಆಗದು. ಯಾಕೆ ಎಂದರೆ ಅಳತೆ ಮಾಡುವ ಸಾಧನ ಅಲ್ಲಿ ಇಲ್ಲ. ನಮ್ಮ ದೇಹವನ್ನು ತೂಗಬಹುದು, ಭಾವನೆಗಳನ್ನು ವಿವೇಚಿಸಬಹುದು, ಆಲೋಚನೆಗಳನ್ನು ವಿಮರ್ಶಿಸಬಹುದು, ಆದರೆ ನನ್ನನ್ನು ನನ್ನ ಆತ್ಮವನ್ನು ತೂಗಲಿಕ್ಕೆ ಆಗುವುದಿಲ್ಲ. ಬೀಜ ತೂಗಬಹುದು. ಬೀಜದೊಳಗಿರುವ ಆ ಹಿಟ್ಟನ್ನು ತೂಗಬಹುದು. ಆದರೆ ಆ ಬೀಜದೊಳಗಿರುವ ಪ್ರಾಣಶಕ್ತಿಯನ್ನು ತೂಗಲು ಬರದು. ಅದು ತೂಕಕ್ಕೆ ನಿಲುಕುವುದೂ ಇಲ್ಲ. ಆದರೆ ಅದು ಇರ ದಿದ್ದರೆ ಬೀಜ ಮೊಳೆಯುವುದಿಲ್ಲ. ಬೀಜ ಮೊಳೆತು ವೃಕ್ಷ ಆಗಬೇಕಾದರೆ ಒಳಗೆ ಆ ಪ್ರಾಣಶಕ್ತಿ ಇರಬೇಕು. ಅದನ್ನು ಅಳೆಯಲಾಗದು. ಹಾಗೆ, ಜಗತ್ತಿನಲ್ಲಿರುವ ಎಲ್ಲವನ್ನೂ ತೂಗಬಹುದು; ಅಳೆಯಬಹುದು; ನೋಡಬಹುದು; ತಿಳಿಯಬಹುದು. ಆದರೆ, ಜಗದ ಒಳಗೂ, ಅದರಾಚೆಯೂ ಇರುವ 'ಋತ' (ಮಹಾಸತ್ಯ)ವನ್ನು ನೋಟ ಹಾಗೂ ಮತಿಗಳು ಗ್ರಹಿಸವು. ನೋಟ, ಮತಿ, ಮನ ಮೌನವಾದ ಬಳಿಕ ಅನುಭಾವ ದೃಷ್ಟಿ ಉದ್ಘಾಟನೆ. ಆ ದೃಷ್ಟಿಗೆ ಋತದರ್ಶನ! ಆ ದರ್ಶನ ಪಡೆದವ ಋಷಿ!

ಲೋಕಸತ್ಯ ಕಂಡವರೂ ಋಷಿಗಳೇ. ಆದರೆ ಅಲೌಕಿಕ ಋತ ಅನುಭವಿಸಿದವರು ಪರಮಋಷಿಗಳು. ಅವರು ನೇತ್ರ ಹಾಗೂ ಮತಿಗಳನ್ನು ಬಳಸದೆ ಪರಮ ಸತ್ಯ(ಋತ) ಕಂಡವರು. ನಾವು ಭೌತ ಋಷಿಗಳು. ಅವರು ಅಭೌತ ಋಷಿಗಳು! ನಮಗೆ ಅವರಿಗೆ ಒಂದು ಭೇದ. ಆ ಋತವನ್ನು ದರ್ಶನ ಮಾಡಿಕೊಂಡ ಋಷಿಯ ಬಾಳಿ ನೊಳಗೆ ಋತ ವ್ಯಾಪಿಸುತ್ತದೆ, ಅಭಿವ್ಯಕ್ತವಾಗುತ್ತದೆ. ಋಷಿಯ ಮಾತಿನಲ್ಲಿ ಋತ ಅಭಿವ್ಯಕ್ತವಾಗುತ್ತದೆ. ಋಷಿಯ ಕಣ್ಣಿನೊಳಗೆ ಋತ ಅಭಿವ್ಯಕ್ತವಾಗುತ್ತದೆ. ಋಷಿಯ ಕಾರ್ಯಗಳಲ್ಲಿ ಋತ ಅಭಿವ್ಯಕ್ತವಾಗುತ್ತದೆ. ಆತನ ಜೀವನ ಸಂತ ಜೀವನವಾಗಿ ಮಾರ್ಪಡುತ್ತದೆ. ಋತದರ್ಶಿಯ ಜೀವನ ಋತಮಯ. ಅವನು ಸತ್‌ಪೂರ್ಣಸಂತ. ಆ ಋತದಲ್ಲಿ ತನ್ನನ್ನು ತಾನು ನಿವೇದಿಸಿಕೊಂಡನಾಗಿ ಅವನು ಶರಣ. ಋಷಿ, ಶರಣ, ಸಂತ! ಅವನು ಜಗತ್ತಿನಲ್ಲಿ ಋತಜ್ಞಾನ ಹರವುತ್ತಾನೆ. ಆದ್ದರಿಂದಾತ ಗುರು.

ಋತದರ್ಶನ ಇಲ್ಲದೆ ಋಷಿ, ಶರಣ, ಗುರು ಆಗಲಾರ. ಋಷಿಯಾದವನ ಮಾತು ಮಂತ್ರ. ಆ ಋತ ದರ್ಶನದ ಛಾಯೆ, ಸುವಾಸನೆ ಮಾತಿನ ಮಧ್ಯೆ ಹೊರಹೊಮ್ಮುವು ದಾದರೆ ಅದು ಗುರುವಚನ. ಅದು ಶರಣನ ಮಾತು. 'ಮಾತೆಂಬುದು ಜ್ಯೋತಿರ್ಲಿಂಗ' ಕರುಣ ರಸದ ಕೋಡಿ ಹರಿವ ಕಟಾಕ್ಷದ ಪರತತ್ವ ಅರುಪುವ ಅಲಾಪದ ವರಪುಣ್ಯ ಮಯ ಶರೀರದ ನಿರಾಭಾರಿ ಸದ್‌ಗುರು ಇರಲೆನ್ನ ಮಾನಸದಲ್ಲಿ' ಋತದರ್ಶನವಾದ ಗುರುವಿನ ಲಕ್ಷಣ ನಿರಾಭಾರಿತ್ವ. ಲೋಕದ ಭಾರ ಇರುವುದಿಲ್ಲ. ಲೋಕಜ್ಞಾನದ ಭಾರ ಇರುವುದಿಲ್ಲ. ಲೋಕಾನುಭವ ರಸದ ಮೋಹ ಇರುವುದಿಲ್ಲ. ಆಗ ಆತ ನಿರಾಭಾರಿ! ಆದ್ದರಿಂದಲೇ ನೈಜ ಗುರು ಮಾತನಾಡುವುದೇ ಬೇರೆ. ಸಾಮಾನ್ಯ ಗುರು ಮಾತನಾಡುವುದೇ ಬೇರೆ. ಬಹಳ ವ್ಯತ್ಯಾಸ. ಆಕಾಶದ ನೀರು ಹರಿದು, ಹರಿದು, ಭೂಮಿ ತೊಯ್ದಾಗ ಸಸ್ಯ ನಳನಳಿಸುತ್ತದೆ. ಅದು ಬೇರೆ. ಒಣಗಿದ ಆಕಾಶ, ಬತ್ತಿಹೋದ ಭೂಮಿ, ಸುಡುವ ಭೂಮಿ, ಇಂಥಲ್ಲಿ ನೀರ ಹನಿಸಿ ಹನಿಸಿ ಬೆಳೆ ಬೆಳೆಯುತ್ತೇವೆ. ಆ ಬೆಳೆಯ

ಬೆಳವಣಿಗೆ ಬೇರೆ. ಧಾರಾಕಾರವಾಗಿ ಮಳೆ ಸುರಿದರೆ ಭೂಮಿ ತಂಪಾಗುತ್ತದೆ. ಗಿಡಮರಗಳು ನಳನಳಿಸುತ್ತವೆ, ಫಲಿಸುತ್ತವೆ. ಆಕಾಶದ ನೀರು ಬಿದ್ದಂತೆ ಶ್ರೇಷ್ಠರ, ಸಂತರ, ಶರಣರ ಮಾತುಗಳು, ಭೂಮಂಡಲಕ್ಕೆ ಸುರಿದ ಜ್ಞಾನದ ನೀರು. ಆ ನೀರು ಸುರಿದರೆ ಶಾಂತವಾಗುತ್ತದೆ ಜಗತ್ತು. ಪಾಂಡಿತ್ಯದ ನೀರು ನಳದ ನೀರಿನಂತೆ. ಅದು ಪರಿಮಿತ ಅಶುದ್ಧ. ಭೂ ಸ್ಪರ್ಶಿತ, ಲವಣಮಿಶ್ರಿತ.

ಆ ಆಕಾಶದ ನೀರು ಶುಭ್ರ, ಸ್ವಚ್ಛ! ಹಾಗೆ ಶ್ರೇಷ್ಠ ಸಂತರ ಮಾತುಗಳು ಮಂತ್ರಸದೃಶ. ಅದರೊಳಗೆ ಅಶುದ್ಧ ಲವಣವಿಲ್ಲ. ನಾನು ನನ್ನದು ಎನ್ನುವ ಅಶುದ್ಧತೆ ಪಾಂಡಿತ್ಯದ ಮಾತಿನಲ್ಲಿ. ಪರಮಾತ್ಮ ಒಂದು ಹಣ್ಣು ಮಾಡಿ ಕೊಡುತ್ತಾನೆ. ಎಷ್ಟು ರುಚಿಯಾದ ಹಣ್ಣು. ದ್ರಾಕ್ಷಿ ಹಣ್ಣು; ಅದನ್ನು ತಿಂದು ಸಂತೋಷಪಡುವುವು ಪಕ್ಷಿಗಳು. ರಸ ತೆಗೆದು ಅದನ್ನು ಹುಳಿಗೊಳಿಸಿ, ಕೆಡಿಸಿ ವೈನ್ ಮಾಡುತ್ತೇವೆ. ಅದು ಮನುಷ್ಯನಿಗೆ ರುಚಿಸುತ್ತದೆ. ಹಾಗೆ ಪಾಂಡಿತ್ಯದ ಮಾತು ಜನರಿಗೆ ಹಿಡಿಸುತ್ತದೆ. ಏಕೆಂದರೆ ಅದರಲ್ಲಿ ಲವಣಗಳಿವೆ. 'ನಾ' ಎನ್ನುವ ಮಾದಕಾಂಶ ಇದೆ. ನಮ್ಮದು ಒಂದು ಸಣ್ಣ ಮನೆ; ಅದರಲ್ಲಿ ಒಂದೇ ಬಾಗಿಲು. ಸಣ್ಣ ಎರಡು ಕಿಟಕಿಗಳು. ಒಂದು ಸಣ್ಣ ಕೋಣೆ. ಅದರಲ್ಲಿ ನಮ್ಮದೊಂದು ಚಿಕ್ಕಹಾಸಿಗೆ. ಇಷ್ಟಿದ್ದರೆ ನಮಗೆ ಎಷ್ಟು ಆನಂದವಾಗುತ್ತದೆ! ಆ ಮನೆಯೊಳಗೆ ಮಲಗಿದರೆ ಎಷ್ಟು ಸಂತೋಷವಾಗುತ್ತದೆ! ಅದರ ಬದಲು ನಮ್ಮದಲ್ಲದ ಈ ಭವ್ಯ ಮಹಲಿನಲ್ಲಿ ಮಲಗಿದಾಗ ಅಷ್ಟು ಸಂತೋಷವಾಗುವುದಿಲ್ಲ. ಯಾವುದು ರುಚಿ ಕೊಡುತ್ತದೆ? ಆ ರುಚಿ 'ಅಹಂ ಮಮ' ಎಂಬ ಎರಡು ಭಾವದಿಂದ ಬಂದುದು. ಆದರೆ ಆಕಾಶದಿಂದ ಬೀಳುವ ಆ ಭಗವಂತನ ದರ್ಶನ ಮಾಡಿಕೊಡುವ ಜನರ ಮುಖದಿಂದ ಬರುವ ಮಾತಿನಲ್ಲಿ ಅಹಂ ಇಲ್ಲ. ಮಮ ಇಲ್ಲ.

ನಮ್ಮ ಮಾತು ರಸಹೀನ. ಅದರಿಂದ ಅಮಲು ಏರುತ್ತದೆಯೇ ವಿನಃ ದಿವ್ಯ ಆರೋಗ್ಯ ಉಂಟಾಗುವುದಿಲ್ಲ. ಆದರೆ ಜ್ಞಾನಿಗಳ ಮಾತು ಕೇಳಿದರೆ ಆನಂದ ಆರೋಗ್ಯ! ಅವರೇ ನಿರಾಭಾರಿ ಗುರುಗಳು. ಅಹಂ ಮಮದ ಭಾರವಿಲ್ಲದ ಋಷಿಗಳು. ಅವರ ಕಣ್ಣಿನಲ್ಲಿ, ಕರುಳಲ್ಲಿ, ಕಾರುಣ್ಯ ರಸ ಹರಿಯುತ್ತಿದೆ. ಪರತತ್ವವ ಜಗದಿ ಅರುಹುವ ಅದಮ್ಯ ಬಯಕೆ ಅವರಿಗೆ.

'ಆ ಗುರುವಿನ ದೇಹ ವರಪುಣ್ಯಮಯ' ಅಂದರೆ ಬಾಹ್ಯಾಂತರ ಶುದ್ಧ. ಅವರ ನುಡಿ ಆಲಿಸಿ ಚಿಂತಿಸುವುದೇ ಭಗವತ್‌ಚಿಂತನ. ಅಲ್ಲಮಪ್ರಭು ದೇವರು ಇಂತಹ ಒಬ್ಬ ಮಹಾನುಭಾವ. ಆಕಾಶದ ಎತ್ತರದ ತತ್ತ್ವವ ಅರಿತು ಬಟ್ಟಬಯಲಾದ ಅಲ್ಲಮ ನಿರಾಭಾರಿ ಗುರು! ಆತನ ಒಂದು ಪುಟ್ಟ ವಚನ ಹೀಗಿದೆ: "ಉದಕದೊಳಗೆ ಕಿಚ್ಚು ಹುಟ್ಟಿ ಸುಡುತ್ತಿದ್ದುದ ಕಂಡೆ ಗಗನದ ಮೇಲೆ ಮಾಮರನ ಕಂಡೆ ಪಕ್ಕವಿಲ್ಲದ ಹಕ್ಕಿ ಬಯಲ ನುಂಗಿತ್ತ ಕಂಡೆ ಗುಹೇಶ್ವರಾ."

ಉದಕದೊಳಗೆ ಕಿಚ್ಚು ಹುಟ್ಟಿತು. ಹುಟ್ಟಿದ ಕಿಚ್ಚು ಉದಕದೊಳಗಿರುವ ಕಲ್ಮಶವನ್ನು ಸುಟ್ಟುಹಾಕಿತು. ಉದಕ ಎಂದರೆ ಹೊಯ್ದಾಡುವ ಹರಿದಾಡುವ ಮನಸ್ಸು. ಕೆಳಮುಖವಾಗಿ ಹರಿವುದು ನೀರು. ಮೇಲ್ಮುಖವಾಗಿ ಹರಿಯುವುದಿಲ್ಲ. ಹಾಗೆ ನಮ್ಮ ಮನಸ್ಸು ಕೆಳಗೆ ಹರಿಯುತ್ತದೆ.

ಮೊದಮೊದಲು ಮನಸ್ಸು ಶುದ್ಧವೇ. ಆ ಬಳಿಕ ಕಾಲ ಕಳೆದಂತೆ ಅದು ಕೆಳ ಕೆಳಗೆ ಹರಿಯುತ್ತದೆ. ಹೊಲಸಾಗುತ್ತದೆ, ಹೆಚ್ಚು ಚಂಚಲಿಸುತ್ತದೆ. ದುರಾಸೆ ಇತ್ಯಾದಿಗಳು ಅದರಲ್ಲಿ ಹೆಚ್ಚಾಗುತ್ತವೆ. ಕೀಳು ವಿಷಯಗಳತ್ತ ನುಗ್ಗುತ್ತದೆ. ಈ ಪವಿತ್ರ ಮಂದಿರದಲ್ಲಿ ಬೇಕಾದಷ್ಟು ಒಳ್ಳೆಯದಿದೆ. ಮನಸ್ಸು ಅಷ್ಟಾಗಿ ಅದನ್ನು ಗಮನಿಸದೆ ಇಲ್ಲಿರುವ ದೋಷಗಳತ್ತ ಇಣುಕುತ್ತದೆ. ಆ ದೋಷವೇ ಅಂತರಂಗವ ತುಂಬಿಕೊಳ್ಳು ತ್ತದೆ. ಜಗತ್ತಿನಲ್ಲಿ ಬೇಕಾದಷ್ಟು ಒಳ್ಳೆಯದಿದೆ. ಅತ್ತ ಲಕ್ಷಿಸದು ಮನಸ್ಸು. ಇಲ್ಲಿರುವ ಹೊಲಸನ್ನೆಲ್ಲಾ ತನ್ನಲ್ಲಿ ತುಂಬಿಕೊಳ್ಳುತ್ತದೆ.

ಜಗತ್ತು ಎಷ್ಟು ಸುಂದರ! ಹಸಿರು, ಹರಿವ ನೀರು, ಹಾರುವ ಹಾಡುವ ಹಕ್ಕಿಗಳು, ಈಜುವ ಮೀನು, ಏನು ಕೆಟ್ಟಿದೆ? ಯಾವ ಪ್ರಾಣಿ ಕೆಟ್ಟಿದೆ? ಯಾವ ಪಶು ಹಾಲಿನಲಿ ನೀರು ಕೂಡಿಸಿ ವಂಚಿಸಿದೆ? ಎಲ್ಲವೂ ಒಳಿತಾಗಿದೆ. ಎಲ್ಲ ಒಳಿತಾಗಿರಬೇಕೆಂದು ಹೇಳುವ ಮನುಷ್ಯನೊಬ್ಬನ ಬಿಟ್ಟು, ಮನಸ್ಸು ಅಂಥ ಸುಂದರ ಜಗತ್ತನ್ನು ಉಪೇಕ್ಷಿಸಿ ಎಲ್ಲೆಲ್ಲಿ ಕುಂದುಕೊರತೆ ಅಲ್ಪತೆ ಇದೆ; ಅದನ್ನೇ ಗಮನಿಸುತ್ತದೆ. ಜಗತ್ತು ಭವ್ಯ. ಅದನ್ನು ಕೆಡಿಸುವ ತ್ರಾಣ ಮನುಷ್ಯನಿಗೆಲ್ಲಿದೆ? ಬಹಳವಾದರೆ ಈ ಪೃಥ್ವಿಯ ಗಾಳಿಯ ಕೆಡಿಸಬಲ್ಲ. ನೀರು ಕೆಡಿಸಬಲ್ಲ. ಮನುಷ್ಯನ ಸಂಪರ್ಕದಿಂದ ಪೂರ್ವ ಕಾಲದ ಸ್ವಚ್ಛ-ಶೀತಲ ಗಂಗೆ ಇಂದು ಏನಾಗಿದೆ? ಮಲಿನ ಗಂಗೆಯಾಗಿದೆ. ಆದರೆ, ಮನುಷ್ಯ ಸಮಸ್ತ ವಿಶ್ವವ ಕೆಡಿಸಲಾರ. ಅದು ದಿವ್ಯವಾಗಿದೆ, ನಿಸ್ಸೀಮವಾಗಿದೆ. ಅದನ್ನೇನು ತಿದ್ದುವುದು? ಕೆಟ್ಟುದು ನಿನ್ನ ಮನ, ನಿನ್ನ ತನು.

ಹೀಗೆ ದೂಷಿತವಾದುದು ಮನಸ್ಸು. ಅದು ಉದಕ. ಅದರಲ್ಲಿ ಕಿಚ್ಚು ಹುಟ್ಟಿತು! ಶ್ರೇಷ್ಠರ ಸಂತರ ಮಾತುಗಳಿಂದ ಒಂದಿಷ್ಟು ಕಿಚ್ಚು ಉಂಟಾಯಿತು. ಚಿಂತನದ ವಚನದ ಕಿಚ್ಚು! 'ಉದಕದೊಳಗೆ ಹುಟ್ಟಿದ ಕಿಚ್ಚು ಸುಡುತ್ತಿದ್ದುದ ಕಂಡೆ' ಆ ಜ್ಞಾನ ಕಿಚ್ಚು ಮನಸ್ಸಿನಲ್ಲಿಯ ಮಾಲಿನ್ಯವನ್ನು ಸುಡುತ್ತದೆ. ಗುರು ವಚನದ ಕಿಚ್ಚು ಮನಸ್ಸಿನ ಅಲ್ಪತನವನ್ನೆಲ್ಲಾ ಸುಟ್ಟುಹಾಕುತ್ತದೆ. ಆಗ ಮನಸ್ಸು ಅಮನವಾಗುತ್ತದೆ. ಅತ್ಯಂತ ಪರಿಶುದ್ಧವಾಗುತ್ತದೆ. ಅದು ಮನಸ್ಸೇ ಅಲ್ಲ. ಅಮನ. ಇಂಥ ಅಮನ ಸ್ಥಿತಿ ಬಂದ ಬಳಿಕ ಆ ಅಮನದೊಳಗೆ ಹೊಸ ದೃಷ್ಟಿ ಉಂಟಾಗುತ್ತದೆ. ಸತ್ಯ ದರ್ಶನದ ಶಕ್ತಿ ಉದ್ಭವಿಸುತ್ತದೆ.



'ಗಗನದ ಮೇಲೆ ಮಾಮರನ ಕಂಡೆ' ಆಗ ಆ ದೃಷ್ಟಿಗೆ ಗಗನದ ಮೇಲಿರುವ ಮಾಮರ ಕಾಣಿಸುತ್ತದೆ. ಮಾವಿನ ಮರ, ಬಹಳ ದೊಡ್ಡವೃಕ್ಷ, ಸವಿಯಾದ ಫಲ ಕೊಡುವ ವೃಕ್ಷ. ಈ ಜಗತ್ತು ಮಾಮರ! ಇದು ಎಲ್ಲಿದೆ? ಗಗನದ ಮೇಲೆ! ಇದರ ಬೇರು ಬಯಲಲ್ಲಿ, ಅಂದರೆ ಈ ಜಗತ್ತಿನ ಹಿನ್ನಲೆಯೊಳಗೆ ಗಗನ! ಬಯಲು! ದೇವ- ಬಯಲು. ಅದರ ಅಸ್ತಿತ್ವ-ರಸಹೀರಿ ಈ ಜಗತ್ತು ಬೆಳೆಯುತ್ತ ಇರುವುದನ್ನು ಅಲ್ಲಮಪ್ರಭು ಕಂಡ! 'ಗಗನದ ಮೇಲೆ ಮಾಮರನ ಕಂಡೆ' - ಎನ್ನುತ್ತಾನೆ.

'ಪಕ್ಕೆ ಇಲ್ಲದ ಹಕ್ಕಿ ಬಯಲ ನುಂಗಿತ್ತ ಕಂಡೆ' ಅಹಂ-ಮಮ ಎಂಬ ಭಾವಗಳು ಪಕ್ಕೆಗಳು ಕಳಚಿದವು. ಆಗ ನಿರಹಂ-ನಿರ್ಮಮನಾದ ಜೀವ ಲೌಕಿಕ ಮಂಡಲದಾಚೆ ಅನಂತತೆಯಲ್ಲಿ ಬೆರೆಯುತ್ತಾನೆ, ಮುಕ್ತನಾಗುತ್ತಾನೆ. ಅವನಲ್ಲಿ ಬಯಲು, ಬಯಲಲ್ಲಿ ಅವನು! 'ಬಯಲು ಬಯಲ ನುಂಗಿತ್ತು' ಇಂಥ ಅಮೂಲ್ಯ ವಚನಗಳ ಚಿಂತನೆಯದು ಭಗವಚ್ಚಿಂತನ. ಇಂತಹ ಮಾತುಗಳನ್ನು ನಾವು ಸವಿಯಬೇಕು.

'ನಾನು ಇಂಥವ, ಅಂಥವ' ಎಂಬ ಭಾವವಿದ್ದರೆ ಶುದ್ಧ ಹಾಗೂ ಫಲಕಾರಿ ಚಿಂತನೆಯಾಗದು. ಅದು ವಿಚಾರವಾದೀತೇ ಹೊರತು ಅನುಭಾವ ಸವಿವ ಚಿಂತನೆಯಾಗದು. ಒಂದು ಗಿಡ ಇತ್ತು. ಗಿಡದ ಕೆಳಗೆ ಒಂದು ಝರಿ. ಯಾತ್ರಿಕನಿಗೆ ನೀರಡಿಕೆ ಆಗಿತ್ತು. ನೀರು ಹರಿಯುತ್ತಿತ್ತು. ಬಾಯೊಳಗೆ ಸುಣ್ಣ ಹಾಕಿಕೊಂಡಿದ್ದಾನೆ. ಎಲೆ ಜಗಿದಿದ್ದಾನೆ. ಅದನ್ನು ಉಗುಳದೆ ನೀರು ಕುಡಿದ. ಅದೆಲ್ಲಾ ಸುಣ್ಣದ ನೀರಾಗಿತ್ತು. 'ಕೆಟ್ಟಿದೆ ನೀರು' ಎಂದ! ಆಗ ಝರಿ ಹೇಳಿತು- ಮನುಷ್ಯನೆ, ಹೊಲಸು ನಿನ್ನಲ್ಲಿದೆ; ಉಗುಳು. ಆಗ ತಿಳಿಯುತ್ತದೆ ನಾನು ಹೇಗಿದ್ದೇನೆ'.

ಶರಣರ ಮಾತುಗಳು ಸ್ವಚ್ಛ ಮಧುರ. ಅವುಗಳ ರುಚಿ ಅನುಭವಕ್ಕೆ ಬರಬೇಕಾದರೆ ನಮ್ಮ ಹೃದಯ ಹಸನಾಗ ಬೇಕು. ನಾವು ಏನೇನೋ ತಿಂದವರು. ಪರಧನ ಪರಸ್ತ್ರೀ ಏನೆಲ್ಲಾ. ದೇಶ-ಕೋಶ ಎಲ್ಲವ ಜಗಿದವರು. ಅದನ್ನೆಲ್ಲಾ ಚೆಲ್ಲಬೇಕು. ಆಗ ವಚನಾಮೃತ!-ಚಿಂತನ.



ಆಗಸ್ಟ್ ೫ ರಂದು, ದೊಡ್ಡಬಳ್ಳಾಪುರದ ಬಸವ ಭವನದಲ್ಲಿ ತಾಲ್ಲೂಕು ವೀರಶೈವ ಲಿಂಗಾಯತ ಸಮಾಜದ ವತಿಯಿಂದ ವಿವಿಧ ಸಂಘಟನೆಗಳ ಸಹಯೋಗದಲ್ಲಿ ನಡೆದ ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗುರುವಂದನಾ ಸಮಾರಂಭ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ, ಶ್ರೀ ಮೇಲಗಣ ಮಠದ ಪರಮಪೂಜ್ಯ ಡಾ. ಶ್ರೀ ಶ್ರೀ ಮಲಯಶಾಂತಮುನಿ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು, ದೊಡ್ಡಬಳ್ಳಾಪುರದ ಶ್ರೀಮನ್ ಸದ್ಧರ್ಮ ಸಂಸ್ಥಾನ ಬಸವೇಶ್ವರ ಮಹಾಮಠದ ಪರಮಪೂಜ್ಯ ಶ್ರೀ ಶ್ರೀ ನಿಶ್ಚಲ ನಿರಂಜನ ದೇಶಿಕೇಂದ್ರ ಸ್ವಾಮೀಜಿ ಹಾಗೂ ಹರಗುರು ಚರಮೂರ್ತಿಗಳ ದಿವ್ಯ ಉಪಸ್ಥಿತಿಯಲ್ಲಿ ನಡೆಯಿತು. ಸಮಾರಂಭದಲ್ಲಿ ಶಾಸಕರು, ಬಿಜೆಪಿ ರಾಜ್ಯ ಘಟಕದ ಉಪಾಧ್ಯಕ್ಷರೂ ಆದ ಶ್ರೀ ಬಿ.ವೈ. ವಿಜಯೇಂದ್ರ, ವೀರಶೈವ ಸಮಾಜದ ಹಿರಿಯ ಮುಖಂಡರಾದ ಶ್ರೀ ಜಿ.ಮರಿಸ್ವಾಮಿ, ಅಖಿಲ ಭಾರತ ವೀರಶೈವ ಮಹಾಸಭಾದ ಯುವ ಘಟಕದ ಅಧ್ಯಕ್ಷರಾದ ಶ್ರೀ ಎಂ.ಸುಜಯ್, ಅ.ಭಾ.ವೀ. ಮಹಾಸಭಾದ ನಿರ್ದೇಶಕರಾದ ಶ್ರೀ ಪ್ರಭಾಕರ್, ಯುವ ಘಟಕದ ಜಿಲ್ಲಾ ಉಪಾಧ್ಯಕ್ಷರ ಶ್ರೀ ಮೋಹನ್, ನಿರ್ದೇಶಕರಾದ ಶ್ರೀಯುತರಾದ ಭರತ್, ಕಿರಣ್, ಮಹದೇಶ, ಚೇತನ, ದೀಪಕ್, ಪ್ರವೀಣ್, ಗಗನ್ ಮೊದಲಾದವರು ಉಪಸ್ಥಿತರಿದ್ದರು.





## ನೆನಪಿನಂಗಳದಿಂದ

# ಮಹಾ ಬೆಳಗು

– ಬಿ.ಎಸ್. ಗವೀಮಠ *

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು ಭರತಖಂಡದ ಮಹಾಬೆಳಕು. ಆ ಬೆಳಕನ್ನು ಹಿಡಿದು ಹಾಕು ಎಂದರೆ ಹೇಗೆ ಸಾಧ್ಯ ಹೇಳಿ !

ನಾನಾದರೂ ನೂರೊಂದು ಸ್ವಾಮಿಗಳನ್ನು, ಸಂತರನ್ನು, ಪೀಠಾಧಿಪತಿಗಳನ್ನು, ಮಠಾಧಿಪತಿಗಳನ್ನು ಕಂಡಿದ್ದೇನೆ. ನೂರಾರು ಸಂಖ್ಯೆಯಲ್ಲಿರುವ ಸ್ವಾಮೀಜಿಗಳಲ್ಲಿ ಹತ್ತಾರು ಜನರನ್ನು ಮಾತ್ರ ಮೆಚ್ಚಿ ನಮಿಸಿದ್ದೇನೆ. ಘಟದಿಂದ ಮಠ ಬೆಳಗಬೇಕು. ಮಠದಿಂದ ಘಟ ಬೆಳಗಬಾರದು. ಅಥಣಿಯ ಶಿವಯೋಗಿಗಳು, ಧಾರವಾಡದ ಮೃತ್ಯುಂಜಯ ಅಪ್ಪಗಳು, ಮುರಗೋಡದ ಮಹಾಂತ ಅಪ್ಪಗಳು, ಬೆಳಗಾವಿಯ ನಾಗನೂರು ರುದ್ರಾಕ್ಷಿ ಮಠದ ಡಾ. ಶ್ರೀ ಶಿವಬಸವ ಮಹಾಸ್ವಾಮಿಗಳು ಹೀಗೆ ಕೆಲವೇ ಕೆಲವು ಪೂಜ್ಯರಿಗೆ ತನ್ನಷ್ಟಕ್ಕೆ ತಾನೇ ತಲೆಬಾಗುತ್ತದೆ. ಇಂಥ ಸ್ವಾಮಿಗಳ ಕುಲಕ್ಕೆ ಆದರ್ಶಪ್ರಾಯರಾಗಿ ನೂರಕ್ಕೂ ಅಧಿಕ ವರ್ಷಗಳ ಕಾಲ ಕರ್ನಾಟಕವನ್ನು, ಕನ್ನಡಿಗರನ್ನು ಹೆಮ್ಮೆಯಿಂದ ಬೀಗುವಂತೆ, ಗೌರವದಿಂದ ಬಾಗುವಂತೆ ಮಾಡಿದ ಪುಣ್ಯಪುರುಷ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ.

ಇಂದಿನ ಕೆಲವೊಂದು ಸ್ವಾಮಿಗಳಿಗೆ ಚರಿತ್ರೆಯೂ ಇಲ್ಲ, ಚಾರಿತ್ರ್ಯವೂ ಇಲ್ಲ. ಸ್ವಾಮಿಗಳು, ಮಠಾಧೀಶರ ಕುರಿತು ನಂಬಿಕೆ ಕಳೆದು ಹೋಗುತ್ತಿದೆ. ಶ್ರೀಮಠಗಳತ್ತ ಅನುಮಾನದಿಂದಲೇ ನೋಡಬೇಕಾಗಿರುವ ಇಂದಿನ ದಿನಮಾನಗಳಲ್ಲಿ ಸಿದ್ಧಗಂಗೆಯ ಸಿದ್ಧಪುರುಷ ಮತ್ತೆ ನಮ್ಮಲ್ಲಿ ಭರವಸೆಯ ಬೆಳಕಾಗಿ ಗೋಚರಿಸುತ್ತಾರೆ. ದೀನದಲಿತರಿಗಾಗಿ ಮರಗುವವರು, ಕಟ್ಟಕಡೆಯ ಮನುಷ್ಯನ ಕಣ್ಣೀರು ಒರೆಸುವವರೇ ನಿಜವಾದ ಮಹಾತ್ಮರು. ಅಂಥ ಮಹಾತ್ಮರನ್ನು ನಾವು ಕಂಡಿದ್ದೇ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಲ್ಲಿ, ಅವರ ಶ್ರೀಮಠದಲ್ಲಿ ಸಮಸ್ತ ವರ್ಗಗಳಿಗೆ ಸೇರಿದವರು. ಯಾವುದೇ ಭೇದ ಭಾವವಿಲ್ಲದೆ ಸಮನಾಗಿ ನೆತ್ತಿಗೆ ಜ್ಞಾನವನ್ನೂ, ಹೊಟ್ಟೆಗೆ ಅನ್ನವನ್ನು ತುಂಬಿಕೊಂಡು ಬಂದಿರುವುದು ಶ್ರೀಗಳ ಜಾತ್ಯಾತೀತ ನಿಲುವಿಗೆ ಸಾಕ್ಷಿಯೆನಿಸುತ್ತಾರೆ.

ಪ್ರತಿ ವರ್ಷ ಹತ್ತು ಸಾವಿರದಷ್ಟು ವಿದ್ಯಾರ್ಥಿಗಳು ಸಿದ್ಧಗಂಗೆಯ ಮಡಿಲಲ್ಲಿ ನಿರಾತಂಕವಾಗಿ, ನಿರಮ್ಮಳವಾಗಿ ಇದ್ದು ಶಿಕ್ಷಣ ಪಡೆದು ಉನ್ನತ ಹುದ್ದೆಗಳನ್ನು ಅಲಂಕರಿಸಿ ಸಮಾಜದ ಆಸ್ತಿಯಾಗಿರುವುದು, ಒಂದು ಪವಾಡವಲ್ಲದೆ ಮತ್ತೇನು? ೮೯ ವರ್ಷಗಳ ಕಾಲ ಲಕ್ಷಾಂತರ ವಿದ್ಯಾರ್ಥಿಗಳಿಗೆ ತಂದೆಯ ರಕ್ಷಣೆಯನ್ನೂ, ತಾಯಿಯ ಮಮತೆಯನ್ನೂ ಉಣಬಡಿಸಿದ ದೇವಮಾನವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು – ನಮ್ಮ ನಾಡಿನ ಆಸ್ತಿ. ಅವರನ್ನು ಕಣ್ತುಂಬಿ, ಮನದುಂಬಿ ನೋಡುವುದೇ ಒಂದು ಭಾಗ್ಯ. ಕರ್ನಾಟಕದ ಉದ್ದಗಲಕ್ಕೂ ಸಂಚರಿಸಿ ಕರ್ನಾಟಕದ ಮಹಾಜನತೆಯ ಆರಾಧ್ಯದೈವವೆನಿಸಿರುವ ಅವರು ಪ್ರತಿ ಊರಿನವರಿಗೂ ಬೇಕೆನಿಸುತ್ತಾರೆ. ಇವರಿಗೆ ಪ್ರತಿ ಊರಿನವರೂ ಆಪ್ತರಾಗಿ ಬಿಡುತ್ತಾರೆ.

ಸಿದ್ಧಗಂಗಾ ಕ್ಷೇತ್ರ ಪ್ರಾಚೀನ ಗುರುಕುಲ ಹಾಗೂ ಆಧುನಿಕ ಕಾಲದ ವಿಶ್ವವಿದ್ಯಾಲಯಗಳ ಮಾದರಿಯನ್ನು ಮೇಳವಿಸಿಕೊಂಡು ವಿದ್ಯಾಕೇಂದ್ರದ ಜೊತೆಗೆ ಆಧ್ಯಾತ್ಮಕೇಂದ್ರವೂ ಎನಿಸಿದೆ. ಸದ್ದಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆ ಏರಿದೆ. ಕಾಯಕವೇ ಕೈಲಾಸವೆನ್ನುವ ಮಾತು ಕೃತಿಯೊಳು ಮೂಡಿದೆ. ಕಾಯಕ ಮಾಡಿದರೆ ಕೈ ಲಾಸ್ ಆಗುತ್ತದೆ ಎನ್ನುವ ದಿನಮಾನಗಳಲ್ಲಿ ಕಾಯಕದಿಂದಲೇ ಕೈಲಾಸ ಪ್ರಾಪ್ತಿ ಎನ್ನುವುದನ್ನು ತೋರಿಸಿಕೊಟ್ಟವರು ಸಿದ್ಧಗಂಗೆಯ ಸಿದ್ಧಿಪುರುಷ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು.

೮೯ ವರ್ಷಗಳ ಕಾಲ ಅಖಂಡವಾಗಿ ಒಂದು ಪೀಠದ ಅಧಿಪತಿಯಾಗಿ ಒಂದಿನಿತೂ ಚ್ಯುತಿ ಬಾರದ ಹಾಗೆ ನಡೆದು ಜನಸಾಮಾನ್ಯರ ಹೃದಯ ಸಿಂಹಾಸನಗಳಲ್ಲಿ ನೆಲೆಸಿರುವ ಶ್ರೀಗಳು ಬದುಕಿರುವಾಗಲೇ ದಂತಕಥೆಯಾದವರು.

ದೀನದಲಿತರ, ಹಳ್ಳಿಗಾಡಿನ ಜನರ ಬದುಕನ್ನು ಎತ್ತರಿಸಲು ಅವರ ಜೀವ ಹಣ್ಣಾಗಿದೆ. ಅವರ ಕೃಪಾದೃಷ್ಟಿಗೆ ಪಾತ್ರರಾದವರೆಲ್ಲ ಉದ್ಧಾರವಾಗಿ ಹೋಗಿದ್ದಾರೆ. ಅಂತೆಯೇ ಅವರು ಗ್ರಾಮಾಂತರ ಪ್ರದೇಶಗಳ ಜನತೆಯ ಪುಣ್ಯದ ಕಣ್ಣಾಗಿದ್ದಾರೆ.

ಪ್ಲಾಟ್ ನಂ. ೬೪೧, ಬೂಡಾ ಸ್ಕೀಂ ನಂ.೪೦, ಹನುಮಾನ ನಗರ, ೩ನೇ ಹಂತ, ಬೆಳಗಾವಿ-೫೯೦೦೦೧





ಸಿದ್ಧಗಂಗೆಯಲ್ಲಿ ಮೌನ ಸಾಮಾಜಿಕ ಕ್ರಾಂತಿಯೇ ನಡೆದು ಹೋಗಿದೆ. ಅಂತೆಯೇ ಅವರು ಜಾತೀಯತೆಯನ್ನು ಹೇಗೆ ಹೋಗಲಾಡಿಸಲು ಸಾಧ್ಯವೆಂಬುದನ್ನು ಪ್ರತ್ಯಕ್ಷವಾಗಿ ತೋರಿಸಿಕೊಟ್ಟ ಯುಗ ಪ್ರವರ್ತಕರೆನಿಸಿದ್ದಾರೆ. ಈ ದೇವ ಕುಸುಮ ಕನ್ನಡ ನಾಡಿನಲ್ಲಿ ಅರಳಿದ್ದು, ಬೆಳಗಿದ್ದು ಕನ್ನಡಿಗರ ಪುಣ್ಯವೇ ಸರಿ ಎಂದು ಜಗದ್ಗುರು ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ನುಡಿದಿರುವುದು ನೂರಕ್ಕೆ ನೂರು ಸತ್ಯವೆನಿಸಿದೆ.

ಬಸವತತ್ತ್ವವನ್ನು ಹಳ್ಳಿ ಹಳ್ಳಿಗೂ ತಲುಪಿಸಿದ ಹೆಗ್ಗಳಿಕೆ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರದು. ಬಸವ ಜಯಂತಿ ಆಚರಿಸುವುದರ ಮೂಲಕ ಬಸವೇಶ್ವರ ನಾಟಕವನ್ನು ಪ್ರದರ್ಶಿಸಿ ಜನಮನದಲ್ಲಿ ಬಸವ ಮಹಿಮೆಯನ್ನು ಚಿರಸ್ಥಾಯಿಗೊಳಿಸಿದ್ದು ಇವರ ಮಹತ್ ಸಾಧನೆ. ಮಹಾಸ್ವಾಮಿಗಳು ನಾಡಿನ ಜನತೆಗೆ ಅಮರ ಸಂದೇಶಗಳನ್ನು ನೀಡುತ್ತಲೇ ಬಂದಿದ್ದಾರೆ. ಅವುಗಳನ್ನು ಮೆಲುಕು ಹಾಕುವುದು ಸರ್ವರಿಗೂ ಶ್ರೇಯಸ್ಕರವಾಗಿದೆ. ಅವರ ನುಡಿಮುತ್ತುಗಳೇ ನಮ್ಮ ಬದುಕಿಗೆ ದಾರಿದೀಪವಾಗಿವೆ. ಅವುಗಳಲ್ಲಿ ಕೆಲವು ಹೀಗಿವೆ :

೧. ಹೆಣ್ಣು ಹೊನ್ನು ಮಣ್ಣು ಮಹಾಜೀವನಕ್ಕೆ ಕುತ್ತು ಎನ್ನುತ್ತಾರೆ. ಬಾಳನ್ನೆ ಹಾಳು ಮಾಡುತ್ತವೆ ಎನ್ನುತ್ತಾರೆ. ಆದರೆ ಹೊನ್ನು ಸರ್ವ ಅರ್ಥಕ್ಕೂ ಸಾಧಕ. ಹೆಣ್ಣು ಮಾತೃ ಸ್ವರೂಪಿ, ಮಣ್ಣು ಭೂಮಿಗೆ ಆಧಾರ. ಮನುಷ್ಯನ ವ್ಯವಹಾರಕ್ಕೆ ಮೂರು ಬೇಕು. ಅವನ್ನು ತಿರಸ್ಕಾರ ಮಾಡುವ ಅಗತ್ಯವಿಲ್ಲ. ಮೂರು ವಸ್ತುಗಳನ್ನು ನೋಡುವ ದೃಷ್ಟಿ ಪವಿತ್ರವಾದರೆ, ಬಳಸುವ ಭಾವ ಶುದ್ಧವಾದರೆ, ಮೂರು ಜೀವನಕ್ಕೆ ಸಾಧಕ. ಮೂರು ಪರಮಾತ್ಮನೆಡೆಗೆ ಕೊಂಡೊಯುತ್ತವೆ.

೨. ಇತ್ತೀಚೆಗೆ ಜಾತಿ ಮತ ಪಂಗಡಗಳ ರಾಜಕೀಯದಿಂದ ಸಾಹಿತ್ಯ ಕ್ಷೇತ್ರದಲ್ಲಿ ಕಲುಷಿತ ವಾತಾವರಣ ಉಂಟಾಗಿದೆ.

೩. ಹೇಡಿತನ ಮಾನವನ ಮಹಾದೌರ್ಬಲ್ಯ. ತನ್ನನ್ನು ತಾನೇ ನಂಬದವನು ನಾಸ್ತಿಕ.

೪. ದೇಶದಲ್ಲಿ ಬಹಳ ಮಂದಿ ಕಷ್ಟ ಅನುಭವಿಸುವಾಗ ಶ್ರೀಮಂತರು ಕಡ್ಡಾಯವಾಗಿ ಸ್ವಯಂಪ್ರೇರಿತರಾಗಿ ಮುಂದೆ ಬಂದು ಬಡವರ ಸೇವೆ ಮಾಡುವುದು ಅವರ ಕರ್ತವ್ಯ. ತ್ಯಾಗಸೇವೆ ಎಂದಾಕ್ಷಣವೇ ಸರ್ವಸ್ವವನ್ನೂ ನೀಡಿ ಭಿಕಾರಿಗಳಾಗಿ ಬೀದಿ ಪಾಲಾಗಬೇಕು ಎಂದರ್ಥವಲ್ಲ. ತಾವು ಉಂಡು ತಿಂದು, ತಮ್ಮ ಕೈಲಾದಷ್ಟನ್ನು ಇತರರಿಗೆ ಬಿಡುಗೈನಿಂದ ನೀಡಿದರೆ ಸಾಕು ಅದೇ ಸೇವೆ. ಕಾಲ ಬದಲಾವಣೆಯಾಗುತ್ತಿದೆ. ಉತ್ತಮ ಸ್ಥಾನದಲ್ಲಿರುವವರು ಹಳ್ಳಿಗರ, ಬಡವರ, ದೀನದಲಿತರ ಉದ್ಧಾರಕ್ಕೆ ಬರಬೇಕು. ಇಲ್ಲದೆ ಹೋದರೆ ಸಾಮಾನ್ಯ ಜನರ ಹೃದಯ ನೊಂದು ಬೆಂದು ಕ್ರಾಂತಿಯಾದೀತು, ರಕ್ತ ಹರಿದೀತು. ಸ್ವಾರ್ಥ ಮುಂದುವರಿದರೆ ಮಹಾವಿಪತ್ತು ಸಂಭವಿಸೀತು.

೫. ಸಮಾಜ ಸೇವೆಯೇ ಶ್ರೇಷ್ಠತಮ ಪೂಜೆ.

೬. ಧರ್ಮ ಎಂದೊಡನೆ ಮನುಷ್ಯ ಊರು ಬಿಟ್ಟು ಕಾಡನ್ನು ಸೇರಬೇಕಾಗಿಲ್ಲ. ಅದು ಮನುಷ್ಯನ ಜೀವನದಲ್ಲಿ ಹಾಸುಹೊಕ್ಕಾಗಿ ಬಳಸಿಕೊಂಡಿದೆ. ಆಡುವ ಆಟದಲ್ಲಿ, ಉಣ್ಣುವ ಅನ್ನದಲ್ಲಿ, ಉಡುವ ಬಟ್ಟೆಯಲ್ಲಿ, ಮಾಡುವ ಕಾರ್ಯದಲ್ಲಿ, ಆಡುವ ಮಾತಿನಲ್ಲಿ, ನೋಡುವ ದೃಷ್ಟಿಯಲ್ಲಿ, ಬಳಸುವ ಭಾವದಲ್ಲಿಯೂ ಧರ್ಮವಿದೆ.

೭. ಹಳೆಯದೆಲ್ಲ ಶ್ರೇಷ್ಠವಲ್ಲ, ಹೊಸತೆಲ್ಲ ಕೆಟ್ಟದ್ದಲ್ಲ, ವಿವೇಕವುಳ್ಳವರು ಪರೀಕ್ಷಿಸಿ ಒಳ್ಳೆಯದನ್ನು ಸ್ವೀಕರಿಸುತ್ತಾರೆ. ಮೂರ್ಖರು ಪರರು ಹೇಳಿದ್ದನ್ನೇ ನಂಬಿ ಬಿಡುತ್ತಾರೆ. ಹೀಗೆ ಶ್ರೀಗಳ ಬದುಕೇ ನಮಗೆ ಮಹಾಸಂದೇಶವಾಗಿದೆ.

ಬೆಳಗಿನ ೩ ರಿಂದ ರಾತ್ರಿ ೧೧ರ ವರೆಗೆ ಕಾಯಕನಿರತರಾಗಿ, ಸಮಾಜದ ಯೋಗಕ್ಷೇಮಗಳ ಚಿಂತಕರಾಗಿ ತೊಡಗಿಸಿಕೊಳ್ಳುತ್ತಿದ್ದ ಶ್ರೀಗಳ ಹತ್ತಿರ ಆಲಸ್ಯ ಸುಳಿಯುತ್ತಲೇ ಇರಲಿಲ್ಲ. ಅವರ ಆರೋಗ್ಯ ಚೆನ್ನಾಗಿರಲು ಕಾರಣ – ಅವರ ಉತ್ತಮವಾದ ಮಾನಸಿಕ ಆರೋಗ್ಯ. ಅವರು ಬದುಕಿರುವುದೇ ಇತರರಿಗಾಗಿ. ಅವರು ನಿಸ್ವಾರ್ಥ ಬದುಕಿಗೆ ನಿದರ್ಶನವೆನಿಸಿದ್ದಾರೆ. ನಾವು ಕೇವಲ ನಮಗಾಗಿ ಬದುಕದೆ ಇತರರಿಗಾಗಿ ಬದುಕಿದಾಗ ಮಾತ್ರ ಸಮಾಜ ಅಂಥವರನ್ನು ಗುರುತಿಸುತ್ತದೆ, ಸ್ಮರಿಸುತ್ತದೆ.

ಅಂಥ ಬದುಕು ಸಾರ್ಥಕ ಬದುಕು. ಅಂಥ ಬದುಕಿಗೆ ಸಾಕ್ಷಿಯಾಗಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಕರ್ನಾಟಕ ಕಂಡಿರುವ ಭಾರತ ರತ್ನವಲ್ಲದೆ ಇನ್ನೇನು !

ಲೇಖನ

# ಭಕ್ತಜಂಗಮರ ಸಕೀಲ ಸಂಬಂಧ ಅಂದು-ಇಂದು

– ಕೋ.ರಂ. ಬಸವರಾಜು *

ಹಿಂದೆ ನಮ್ಮ ಧರ್ಮದಲ್ಲಿ ಗುರುಶಿಷ್ಯರ ಭಕ್ತಿಜಂಗಮರ ಸಕೀಲಸಂಬಂಧ ಗಾಢವಾಗಿತ್ತು. ಗುರುಜಂಗಮರು ಭಕ್ತರ ಬಿನ್ನಹ ಮಾತ್ರ ಪೂರೈಸುತ್ತಿರಲಿಲ್ಲ. ಪರಂತು ಭವದಿಂದ ಅವರನ್ನು ಮುಕ್ತಿಗೊಳಿಸುತ್ತಿದ್ದರು. ಭಕ್ತನು ತಾನು ಪ್ರಪಂಚ ಮಾಡುವಾಗ ಬಂದೆರಗುತ್ತಿದ್ದ ದುಃಖದುಮ್ಮಾನಗಳನ್ನು ಆ ಗುರುಜಂಗಮರ ಸಾನ್ನಿಧ್ಯದಲ್ಲಿ ಬಿನ್ನಹ ಮಾಡಿಕೊಳ್ಳುತ್ತಿದ್ದ. ಆಗವರು ಅಂಥ ಭಕ್ತನಿಗೆ ಸಾಂತ್ವನ ಸಮಾಧಾನ ಹೇಳಿ ಸಂತೈಸುತ್ತಿದ್ದರು ಹಾಗೂ ಬಿನ್ನಹದ ಅವಕಾಶವನ್ನು ಉಪಯೋಗಿಸಿಕೊಂಡು ನಮ್ಮ ಧರ್ಮದ ಬಗ್ಗೆ ತಿಳುವಳಿಕೆ ನೀಡುತ್ತಿದ್ದರು. 'ಅಷ್ಟಾವರಣಸಂಪನ್ನರಾಗಬೇಕು, ಲಿಂಗಾರ್ಚನೆ ಅರ್ಪಣೆ ಅನುಭಾವಾದಿಗಳನ್ನು ಮಾಡಬೇಕೆಂಬುದಾಗಿ' ಅಧಿಕಾರವಾಣಿಯಿಂದ ಹೇಳುತ್ತಿದ್ದರು. ಅಂದಿನ ಕಾಲದ ಗುರುಜಂಗಮರೂ ಕೂಡ ಆಚಾರನಿಷ್ಠರಾಗಿ ಸಮಾಜದ ಬಗ್ಗೆ ಕಳಕಳಿಯುಳ್ಳವರಾಗಿದ್ದರು. ಅದರಂತೆ ಶಿಷ್ಯಭಕ್ತರೂ ಸಹ ಗುರುಲಿಂಗಜಂಗಮ ಪ್ರೇಮಿಗಳಾಗಿ ಲಿಂಗಪೂಜಾನಿಷ್ಠರಾಗಿ, ಧರ್ಮಾಚರಣೆಯಲ್ಲಿ ತತ್ಪರರಾಗಿದ್ದರು. 'ಯಥಾ ಗುರುಃ ತಥಾ ಶಿಷ್ಯಾಃ' ಎಂಬ ಗಾದೆಯ ಅರ್ಥಕ್ಕೆ ಭಾಜನರಾಗಿದ್ದರು. ಆದರೆ ಇಂದು ಬಹಳಷ್ಟು ಮಂದಿ ನಮ್ಮ ಧರ್ಮದ ಗುರುಗಳು ಅಖಂಡಬ್ರಹ್ಮಚರ್ಯೆ ಅಖಂಡಲಿಂಗತಪಸ್ಸು ಹಾಗೂ ಅಖಂಡಕಾಯಕನಿಷ್ಠೆ ಇವುಗಳನ್ನು ಸಾಧಿಸದೇ ಕೇವಲ ಶೂನ್ಯಸಂಪಾದಕರಾಗಿದ್ದಾರೆ. ಮತ್ತು ಆಚಾರನಿಷ್ಠೆಯ ಸಡಿಲಿಕೆಯಿಂದ ಪ್ರಭುಸಂಹಿತೆಯ ಶಕ್ತಿಯನ್ನು ಕಳೆದುಕೊಂಡಿದ್ದಾರೆ. ಇದನ್ನು ಗಮನಿಸಿದ ಧರ್ಮಶ್ರದ್ಧಾಳುಗಳಾದ ಭಕ್ತರೂ ಕೂಡ ದೂರಸರಿಯುತ್ತಿದ್ದಾರೆ. ಇದರಿಂದ ಸಕೀಲ ಸಂಬಂಧ ಕಡಿದುಹೋಗುತ್ತಿದೆ.

ನಮ್ಮ ಧರ್ಮಬಂಧುಗಳೂ ಇದಕ್ಕೆ ತಕ್ಕಂತೆಯೇ ಇದ್ದಾರೆ. ಸುಖದ ಮರೀಚಿಕೆ ಎಂಬ ಕುದುರೆಯ ಬೆನ್ನಹತ್ತಿ ಇಂದ್ರಚಾಪವನ್ನು ಹಿಡಿಯಲು ಹೊರಟಿದ್ದಾರೆ. ಅವರಿಗೆ ತಮ್ಮ ಮಕ್ಕಳು ಅಷ್ಟಾವರಣ ಸಂಪನ್ನರಾಗುವುದು ಬೇಕಿಲ್ಲ ; ಧನಸಂಪನ್ನರಾದರೆ ಸಾಕು. ಧರ್ಮಚಾರಣೆ ಬೇಕಿಲ್ಲ, ಧನಾಚಾರಣೆ ಸಾಕು. ಎಳೆ ಹರಯದಲ್ಲಿ ಆತ್ಮವಿಕಾಸ ಸಂಸ್ಕಾರ ಬೇಡ, ಹಣ ಗಳಿಕೆಯ ವಿದ್ಯೆ ಸಾಕು.

ಆದರೆ ಹಿಂದಿನ ನಮ್ಮ ಗ್ರಾಮಭಾರತದ ಸಮಾಜಬಂಧುಗಳು ಧರ್ಮಶ್ರದ್ಧೆಯುಳ್ಳವರಾಗಿದ್ದರು. ಬ್ರಾಹ್ಮೀ ಮುಹೂರ್ತದಲ್ಲೆದ್ದು ಶಿವನ ಬಗ್ಗೆ ಹಾಡಿ, ಗುರುವ ಸ್ಮರಿಸಿ, ಅರ್ತಿಯಿಂದ ಲಿಂಗವ ಪೂಜಿಸಿ ಮನಃಪ್ರಸನ್ನತೆ ಪಡೆದು ಅಸಿ ಮಸಿ ಕೃಷಿ ವಾಣಿಜ್ಯಾದಿ ಸತ್ಯಶುದ್ಧ ಕಾಯಕದಲ್ಲಿ ನಿರತರಾಗಿರುತ್ತಿದ್ದರು. ಆ ಕಾಲದಲ್ಲಿ ಒಬ್ಬ ಸಾಮಾನ್ಯ ರೈತನೂ ಕೂಡ ತ್ರಿಕಾಲ ಲಿಂಗಾರ್ಚನೆಗೈಯ್ಯುತ್ತಿದ್ದ. ಆ ನೇಗಿಲಯೋಗಿ ಆರಂಭ ಕಾಯಕದ ಮಧ್ಯೆ ಕ್ಷಣಹೊತ್ತು ಹೂಡಿದ್ದ ಆರನ್ನು ನಿಲ್ಲಿಸಿ ತಂಬಿಗೆ ನೀರಿನಿಂದ ಮುಖ ಮಾರ್ಜನೆ ಮಾಡಿ ವಿಭೂತಿ ಧಾರಣೆ ಮಾಡಿಕೊಂಡು ಲಿಂಗೈಯ್ಯನಿಗೆ ನೀರೆರೆದು ಪೂಜಿಸಿ ಅರ್ಪಿತವ ಮಾಡಿ ಪ್ರಸಾದ ಸ್ವೀಕರಿಸುತ್ತಿದ್ದ. ಅಂದು ನಮ್ಮ ಧರ್ಮ ಶಿವಶರಣರ ಪರಂಪರೆಯಿಂದ ಬಂದ ಚಿಂತನೆಗಳ ಸಂವಿಧಾನವಾಗಿತ್ತು. ಆದರೆ ಇಂದು ಸ್ವಯಂಘೋಷಿತ ಬುದ್ಧಿವಂತರ ವಿಪರ್ಯಾಸ ಚಿಂತನೆಗಳ ರಾಶಿಯಾಗಿದೆ. ಅಂದು ನಮ್ಮ ಧರ್ಮಶಿವಶಾಸನವಾಗಿತ್ತು. ಧರ್ಮದ ವಿಧಿನಿಷೇಧಗಳನ್ನು ನಮ್ಮ ಧರ್ಮೀಯರು ಪರಿಪಾಲಿಸುತ್ತಿದ್ದರು. ಲಿಂಗಾಯತನು ಎಂತಹ ಸಂದರ್ಭದಲ್ಲಿಯೂ ಮಾಂಸವನ್ನು ತಿನ್ನುತ್ತಿರಲಿಲ್ಲ. ಕುಡಿಯಬಾರದ್ದನ್ನು ಕುಡಿಯುತ್ತಿರಲಿಲ್ಲ. ಅತಿಥಿರೂಪದಲ್ಲಿ ಚರಿಸುವ ಜಂಗಮಕ್ಕೆ ದಾಸೋಹ ಮಾಡದೇ ಭುಂಜಿಸುತ್ತಿರಲಿಲ್ಲ. ಕೃತಿಯಿಂದಲಾಗಲಿ, ಮನದಿಂದಲಾಗಲಿ, ಮಾತಿನಿಂದಾಗಲಿ, ಪರರನ್ನು ನೋಯಿಸುತ್ತಿರಲಿಲ್ಲ. ಹೊತ್ತಾರೆ ಎದ್ದು ಗುರುಧ್ಯಾನ, ಲಿಂಗಧ್ಯಾನಗಳನ್ನು ಮಾಡುವುದು ತಪ್ಪುತ್ತಿರಲಿಲ್ಲ. ಇದು ನಮ್ಮ ಲಿಂಗಾನುಶಾಸನವಾಗಿತ್ತು. ಆದರೆ ಇಂದು ಅದು ನಮ್ಮ ಧರ್ಮೀಯರ ಇಚ್ಛಾನುಶಾಸನವಾಗಿದೆ.

ನಮ್ಮ ಹಿಂದಿನವರು **'ಪಂಚಮಹಾಯಜ್ಞಾಃ ಕರ್ತವ್ಯಾ ಗೃಹಿಣಾಮುದಾ'** ಎಂಬಂತೆ ವೈಯಕ್ತಿಕವಾದ ಹಾಗೂ ಸಾಮಾಜಿಕವಾದ ಪಂಚಮಹಾಯಜ್ಞಗಳನ್ನು ಆಚರಿಸುತ್ತಿದ್ದರು. ತಪೋ, ಕರ್ಮ, ಜಪ, ಧ್ಯಾನ ಮತ್ತು ಜ್ಞಾನ ಇವು ವ್ಯಕ್ತಿಗತ ಯಜ್ಞಗಳು. ಇವಕ್ಕೆ ಶಿವಯಜ್ಞವೆಂದೂ ಹೆಸರು. **'ಪಂಚಪ್ರಕಾರೋಽಯಂ ಶಿವಯಜ್ಞಃ ಪ್ರಕೀರ್ತಿತಃ'** ಇಲ್ಲಿ ಯಜ್ಞ ಎಂದರೆ ಅಗ್ನಿಕಾರ್ಯವಲ್ಲ. ಪೂಜೆ, ಸೇವೆ, ಭಜನೆ ಎಂದರ್ಥ. ಇವು ನಮ್ಮ ಧರ್ಮದ ಆಚರಣೆಯ ಅಂಗಗಳು. ಇವುಗಳ ವಿವರಣೆ ಹೀಗಿದೆ ; ವ್ಯಕ್ತಿಗತವಾದ ಯಜ್ಞಗಳಲ್ಲಿ ಶಿವನಿಗಾಗಿ ದೇಹವನ್ನು ದಂಡಿಸುವುದೇ ತಪಸ್ಸು. ಶಿವಾರ್ಚನೆ ಅಥವಾ ಲಿಂಗಾರ್ಚನೆಯೇ ಕರ್ಮ. ಪ್ರಣವಪಂಚಾಕ್ಷರಾಭ್ಯಾಸವೇ ಜಪ. ಶಿವರೂಪ ಚಿಂತನೆಯೇ ಧ್ಯಾನ. ವಚನಾಗಮಾರ್ಥ ವಿಜ್ಞಾನವೇ ಜ್ಞಾನ. ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಬ್ರಹ್ಮಯಜ್ಞ ಇವು ಸಾಮಾಜಿಕ ಯಜ್ಞಗಳು. ದೇವತಾರಾಧನೆ ಮಾಡುವುದೇ ದೇವಯಜ್ಞ. ಹಿರಿಯರನ್ನು ಪೂಜಿಸುವುದೇ ಪಿತೃಯಜ್ಞ, ಗೋವು ಪಶುಪಕ್ಷಿಗಳಾದಿಗೆ ಆಹಾರ ಕೊಡುವುದೇ ಭೂತಯಜ್ಞ, ಜಂಗಮಾರಾಧನೆಗೈಯ್ಯುವುದೇ ಮನುಷ್ಯಯಜ್ಞ, ವೇದಾಗಮ ವಚನಗಳ ಅಧ್ಯಯನವೇ ಬ್ರಹ್ಮಯಜ್ಞ. ಇವೇ ಸಾಮಾಜಿಕ ಯಜ್ಞಗಳು. ಇವುಗಳಿಗೆ ಬ್ರಹ್ಮಯಜ್ಞಗಳೆಂದೂ ಹೆಸರು. ಇವುಗಳನ್ನು ನಮ್ಮ ಪೂರ್ವಿಕರು ಆಚರಿಸುತ್ತಿದ್ದರು.

ಇದು ವೀರಶೈವಧರ್ಮದ ಅಂದಿನ ಗತಿಯ ಸ್ಥೂಲ ನೋಟ. ಇಂದಿನ ಅತಿ ನಾಗರಿಕತೆಯ ಅವಸರದ ಈ ಜಗತ್ತಿನಲ್ಲಿ ನಮ್ಮ ಧರ್ಮವನ್ನು ಉಳಿಸಿ ಬೆಳೆಸುವುದು ದುಃಸಾಧ್ಯವಾಗಿದೆ. ಈ ದುಃಸಾಧ್ಯವನ್ನು ಸಾಧ್ಯಗೊಳಿಸಲು ನಮ್ಮ ಧರ್ಮಗುರುಗಳು, ಧರ್ಮನೇತಾರರು, ಹಿರಿಯರು ಸಾಮೂಹಿಕವಾಗಿ ಎಚ್ಚರಗೊಳ್ಳಬೇಕಾಗಿದೆ. ನಮ್ಮ ನವ ಪೀಳಿಗೆಗೆ ಲೋಕಶಿಕ್ಷಣದ ಜೊತೆಗೆ, ಧರ್ಮಶಿಕ್ಷಣವನ್ನು ಬಾಲ್ಯದಿಂದಲೇ ಕೊಡಬೇಕಾಗಿದೆ. ಯುವಪೀಳಿಗೆಗೆ ಧರ್ಮವನ್ನು ವೈಜ್ಞಾನಿಕವಾಗಿ, ವೈಚಾರಿಕವಾಗಿ ಬೋಧಿಸಬೇಕಾಗಿದೆ. ಉದಾಹರಣೆಗೆ ವಿಭೂತಿ, ರುದ್ರಾಕ್ಷ, ಮಂತ್ರಾದಿ ಅಷ್ಟಾವರಣ ಧಾರಣೆ ಕೇವಲ ಧಾರ್ಮಿಕ ಸಾಧನ ಮಾತ್ರವಲ್ಲ, ಅನೇಕಾನೇಕ ರೋಗ ನಿರೋಧಕ ಸಾಧನ ಹಾಗೂ ಆರೋಗ್ಯ ಸಂವರ್ಧನವೆಂಬುದನ್ನು ಪ್ರಾಯೋಗಿಕವಾಗಿ ವಿಶ್ಲೇಷಿಸಿ ಹೇಳಬೇಕಾಗಿದೆ. ಇಷ್ಟಲಿಂಗದ ತಾರಕ ಯೋಗ ಅಥವಾ ದೃಷ್ಟಿಯೋಗದಿಂದ ಯೌಗಿಕಶಕ್ತಿಯನ್ನು ಸಂಪಾದಿಸುವ ಕ್ರಮವನ್ನು ಲಿಂಗಯೋಗಿಗಳಿಂದ ಪ್ರಾತ್ಯಕ್ಷಿಕವಾಗಿ ಯುವಕರಿಗೆ ಕಲಿಸಬೇಕಾಗಿದೆ. ಜೊತೆಗೆ ಅಷ್ಟಾವರಣ ಧಾರಣೆ ಹಾಗೂ ಲಿಂಗಧಾರಣೆಗಳಿಂದಾಗುವ ಲೌಕಿಕ ಪ್ರಯೋಜನವನ್ನು ತಿಳಿಹೇಳಿ ಧರ್ಮಾಭಿಮಾನವನ್ನು ಮೂಡಿಸಬೇಕಾಗಿದೆ. ಬಸವಣ್ಣನವರು ಹೇಳಿದ **'ಸುಪ್ರಭಾತ ಸಮಯದಲ್ಲಿ ಅರ್ತಿಯಿಂ ಲಿಂಗವ ನೆನೆದರೆ ತಪ್ಪುವವು ಅಪಮೃತ್ಯು ಕಾಲಕರ್ಮಂಗಳಯ್ಯಾ. ದೇವ ಪೂಜೆಯ ಮಾಟ ದುರಿತಬಂಧನದೋಟ'** ಮುಂತಾದ ವಚನಾರ್ಥವನ್ನು ಮನದಟ್ಟು ಮಾಡಿಸ ಬೇಕಾಗಿದೆ. ಮಕ್ಕಳಿಗಾಗಿ ಧರ್ಮಶಿಕ್ಷಣದ ಬೇಸಿಗೆ ಶಿಬಿರಗಳನ್ನು ವ್ಯವಸ್ಥೆಗೊಳಿಸ ಬೇಕಾಗಿದೆ.

ನಾವಿಂದು ಕೇವಲ ಲಿಂಗಾಯತರಾದರೆ ಸಾಲದು. ಲಿಂಗಾಯತ್ತರಾಗಬೇಕು. ಅಂದರೆ ಲಿಂಗಕ್ಕೆ ಆಯತ್ತರಾಗಿ= ಅಧೀನರಾಗಿ ಧೀರರಾಗಿ ಬದುಕಬೇಕು. ಅದನ್ನೇ ಬಸವಣ್ಣನವರು :

**'ಲಿಂಗವಶದಿಂದ ಬಂದ ನಡೆಗಳು**
**ಲಿಂಗವಶದಿಂದ ಬಂದ ನುಡಿಗಳು**
**ಲಿಂಗವಂತರು ನಾವು ಅಂಜಲೇಕೆ?**
**ಲಿಂಗವಿರಿಸಿದಂತಿಪ್ಪುದಲ್ಲದೆ**
**ಕೂಡಲಸಂಗಮದೇವಾ ಭಕ್ತರಭಿಮಾನ ತನ್ನದೆಂಬೆನಾಗಿ'**

ಎಂದಿದ್ದಾರೆ.

ಒಟ್ಟಿನಲ್ಲಿ ನಮ್ಮ ವೀರಶೈವ ಲಿಂಗಾಯತ ಧರ್ಮ ಇಂದು ಉಳಿಯಬೇಕಾದರೆ, ಬೆಳೆಯಬೇಕಾದರೆ ಅದು ಸರ್ಕಾರದ ವಯಸ್ಕರ ಶಿಕ್ಷಣದಂತಾಗದೇ ಮನೆಯ ಶಿಶುಶಿಕ್ಷಣವಾಗಬೇಕು, ಮಠದ ಪೀಠದ ಸಂಸ್ಕಾರ ಶಿಕ್ಷಣವಾಗಬೇಕು.

* ನಿವೃತ್ತ ಪ್ರಾಧ್ಯಾಪಕರು, ಸಿದ್ಧಗಂಗಾ ಸಂಸ್ಕೃತ ಮಹಾವಿದ್ಯಾಲಯ, ಸಿದ್ಧಗಂಗಾ ಮಠ, ತುಮಕೂರು





ಸಾಂದರ್ಭಿಕ

# ಶಿಕ್ಷಕರ ಕಾರ್ಯ ನಿರ್ವಹಣೆ; ಹಲವು ಸಲಹೆಗಳು

– ಪ್ರೊ. ಎಂ.ಬಿ. ಸದಾಶಿವಯ್ಯ *

"When we talk about Modern India with a progressive and dynamic mindset, students need a modified syllabus, an activity based learning atmosphere in schools and colleges".

ಶಾಲಾ ಕಾಲೇಜುಗಳು, ಶಿಕ್ಷಣ ಕ್ಷೇತ್ರದಲ್ಲಿ ಬಹು ಮಹತ್ತರ ಮತ್ತು ಸವಾಲುಗಳುಳ್ಳ ಸ್ಥಳಗಳಾಗಿವೆ. ಅದರಲ್ಲೂ ವಿಶೇಷವಾಗಿ ಶಾಲಾಹಂತದ ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ಮತ್ತು ಪೋಷಕರಿಗೆ ಅತಿ ಹೆಚ್ಚಿನ ಘೋರಸ್ವಪ್ನಗಳಾಗಿ ಪರಿವರ್ತನೆಗೊಂಡಿವೆ ಎಂದರೆ ತಪ್ಪಾಗಲಾರದು. ಶಾಲಾಹಂತದಲ್ಲಿ ಮಕ್ಕಳಿಗೆ, ಹೊಸ ಮತ್ತು ತಾಜಾ ಜ್ಞಾನ ಕೌಶಲ್ಯದ ಭಂಡಾರದ ನಿರೀಕ್ಷಣೆಯಾದರೆ, ಪೋಷಕರಿಗೆ ಮಕ್ಕಳ ಬೆಳವಣಿಗೆ, ಅವರ ಸಾಧನೆ, ಅವರ ಮೇಲಿಟ್ಟಿರುವ ಭರವಸೆಯ ಕನಸುಗಳಾಗಿರುತ್ತವೆ. ಇನ್ನು ಶಿಕ್ಷಕವರ್ಗಕ್ಕೆ ಪಾಠ ಪ್ರವಚನ ಒಂದು ನಿತ್ಯಕ್ರಮವಾದರೂ, ದಿನನಿತ್ಯ ನವೀನ್ಯತೆ ಉಂಟುಮಾಡುವ ಪ್ರಯೋಗ ಸ್ಥಳಗಳಾಗಿರುತ್ತವೆ.

ಶಿಕ್ಷಣ ಒಂದು ಅಡಚಣೆ ಇಲ್ಲದ ಪಯಣವಾಗಿ, ಶಿಕ್ಷಕನ ಬೋಧನಾ ಕ್ರಮ ಯಶಸ್ವಿಯಾಗಬೇಕಾದರೆ, ಹಲವು ಸಲಹೆಗಳು ದಿಕ್ಸೂಚಿಯಾಗಬಹುದು. ಮೊದಲನೆಯದಾಗಿ ಶಿಕ್ಷಕರು ಸೌಹಾರ್ದಯುತವಾದ ತರಗತಿ ವಾತಾವರಣ ಒದಗಿಸಿ, ಅನಾವಶ್ಯಕವಾಗಿ ವೈಯಕ್ತಿಕ (ವಿದ್ಯಾರ್ಥಿಗಳ, ಪೋಷಕರ ಇತರರ) ವಿಚಾರಗಳನ್ನು ಉಲ್ಲೇಖ ಅಥವಾ ವಿಮರ್ಶೆಯಿಂದ ದೂರವಿರುವುದು ಅತ್ಯವಶ್ಯಕ. ಶಿಕ್ಷಕರಲ್ಲಿ ಸ್ವಪರಾಮರ್ಶೆ ಮತ್ತು ಸ್ವನಿಯಂತ್ರಣ ಹಲವಾರು ಅನಗತ್ಯ ಸಂಘರ್ಷ ಮತ್ತು ತಿಕ್ಕಾಟಗಳಿಗೆ ಆಸ್ಪದ ಕೊಡುವುದಿಲ್ಲ.

ಎರಡನೆಯದು ಅಧ್ಯಾಪಕರ ಸಿದ್ಧತೆ (Teachers' Readiness) ಅಪಾರ, ಆಳವಾದ ನವೀಕೃತ ವಿಷಯ ಪ್ರಭುತ್ವ ಇಂದು ನಾವು ಸರ್ವತ್ರ ಕಾಣುತ್ತಿರುವುದು ಜ್ಞಾನಕ್ರಾಂತಿ (Knowledge Revolution) ಜ್ಞಾನ, ಘಾತೀಯ ವೇಗದಲ್ಲಿ (Exponential Rate) ಬೆಳೆಯುತ್ತಿದೆ. ಎಲ್ಲ ಅಡಚಣೆಗಳನ್ನು ಮೀರಿ ಶಿಕ್ಷಕರು, ಆ ಜ್ಞಾನವನ್ನು ಪಡೆಯುವ ಸಾಹಸ ಮತ್ತು ಸನ್ನದ್ಧತೆಯನ್ನು ಬೆಳೆಸಿಕೊಳ್ಳಬೇಕು ಹಾಗೂ ಆ ನವೀಕರಿಸಲಾದ ಜ್ಞಾನವನ್ನು ತಮ್ಮ ಬೋಧನಾ ವಿಷಯದಲ್ಲಿ, ನವಿರಾಗಿ ಮಿಶ್ರಣ ಮಾಡಿದ್ದಲ್ಲಿ, ಶಿಕ್ಷಕನ ಹಾಗೂ ಶಿಕ್ಷಣದ ಪ್ರಸ್ತುತತೆ ಹೆಚ್ಚುತ್ತದೆ.

ಸುಧಾರಿತ ಮತ್ತು ಆಕರ್ಷಕ ಬೋಧನಾ ವಿಧಾನಗಳು (Methodology) ಇಂದು ಅತ್ಯವಶ್ಯಕ. ಕಾರಣ ಆಧುನಿಕ ಡಿಜಿಟಲ್ ಯುಗದಲ್ಲಿ, ಬಾಲ್ಯಾವಸ್ಥೆಯಿಂದಲೇ ಎಲ್ಲ ಎಲ್ಲೆಗಳನ್ನು ಮೀರಿ, ಮಕ್ಕಳು ಜ್ಞಾನಸಂಪತ್ತನ್ನು ಹೊಂದಿರುತ್ತಾರೆ. (ಇಂದು ಮಕ್ಕಳು ಮೊಬೈಲ್ ಮತ್ತು ಲ್ಯಾಪ್‌ಟಾಪ್‌ಗಳ addict ಆಗಿರುವ ಇನ್ನೊಂದು ಮುಖವನ್ನು ಕಾಣಬಹುದು)

ಇನ್ನು ಕೌಶಲ್ಯಗಳ ಬಗ್ಗೆ ಹೇಳುವುದಾದರೆ 'Communication and digital literacy are the two gifts. We have been enjoying the fruits. Let us nurture and continue the same for future generartion also' ಕಂಪ್ಯೂಟರ್ ಮತ್ತು ಮೊಬೈಲ್ ಬಳಸಲಾರದ ವಿದ್ಯಾವಂತ ಇಂದು ಅನಕ್ಷರಸ್ಥ (illiterate) ಎಂದು ಕರೆಸಿಕೊಳ್ಳುತ್ತಾನೆ. Problem solving skill ಸಮಸ್ಯೆ ಪರಿಹರಿಸುವ ಕೌಶಲ್ಯ ಇಂದು ಬೋಧನೆಯಲ್ಲಿ ಅತ್ಯವಶ್ಯಕವಾಗಿ ಪೂರಕವಾಗಬೇಕು. Smart boards, Techno Schools, Digiral Library ಮುಂತಾದ ಅತ್ಯಾಧುನಿಕ ಮತ್ತು ವಿದ್ಯಾರ್ಥಿಗಳನ್ನು ಮತ್ತು ಪೋಷಕರನ್ನು ಆಕರ್ಷಿಸುವ ಶಾಲಾಕಾಲೇಜುಗಳಲ್ಲಿ ಶಿಕ್ಷಕನ ಸಿದ್ಧತೆ ಮತ್ತು ತಯಾರಿ ಒಂದು ಸವಾಲಲ್ಲವೆ?

* ನಿವೃತ್ತ ಪ್ರಾಂಶುಪಾಲರು, ಶ್ರೀ ಸಿದ್ಧಗಂಗಾ ಪದವಿ ಕಾಲೇಜು, ತುಮಕೂರು.





ತರಗತಿಯಲ್ಲಿ ಶಿಕ್ಷಕರು ಉಪಯೋಗಿಸುವ ಭಾಷೆ ಸಾಂಪ್ರದಾಯಿಕ (formal) ಆಗಿದ್ದು ಶಬ್ದಕೋಶ (Vocabulary) ಅಸಂದಿಗ್ಧವಾಗಿ (unambiguous) ಧ್ವನಿ ಮತ್ತು ಸ್ವರ (tone) ಗೌರವಯುತವಾಗಿದ್ದಲ್ಲಿ ಬೋಧನೆಯು ಗಾಂಭೀರ್ಯ ಮತ್ತು ಆಕರ್ಷಣೆ ಹೆಚ್ಚುತ್ತದೆ.

ವಿಷಯ ಅಥವಾ ಶೀರ್ಷಿಕೆಯ ಆಯ್ಕೆ ಮತ್ತು ಪರಿಚಯಿಸುವ (Selection and Presentation) ವಿಧಾನದ ಅತ್ಯಮೂಲ್ಯ ಮತ್ತು ಸರ್ವಕಾಲಿಕ ಸೂತ್ರಗಳು :

Simple to complex, known to unknown and concrete to abstract ಇದ್ದಲ್ಲಿ ಕಲಿಕೆ ಸುಲಭ ಮತ್ತು ಕುತೂಹಲಕಾರಿಯಾಗಿರುತ್ತದೆ.

ತರಗತಿಯಲ್ಲಿ ಶಿಕ್ಷಕರು ಮುಖ್ಯವಾಗಿ ಗಮನಿಸ ಬೇಕಾದ ಅಂಶವೆಂದರೆ, ವಿವಿಧ ಮತ್ತು ವಿವಿಧಾಸಕ್ತಿ ಉಳ್ಳ ವಿದ್ಯಾರ್ಥಿಗಳ ಜೊತೆ ಬುದ್ಧಿಮಾಂದ್ಯ ಮತ್ತು Learning disability ಇರುವ ಮತ್ತು ಸಂಕೋಚ ಸ್ವಭಾವದ ವಿದ್ಯಾರ್ಥಿಗಳ ಸಮೂಹವಿರುತ್ತದೆ. ಎಲ್ಲ ವಿದ್ಯಾರ್ಥಿ ಗಳಿಗೂ ಸದವಕಾಶ ಒದಗಿಸಬೇಕು. Fair opportunity for all ಪ್ರಮುಖವಾಗಿರುತ್ತದೆ. ಹಿಂದುಳಿದ ಮತ್ತು ಕಲಿಕೆಯಲ್ಲಿ ನಿರಾಸಕ್ತಿ ಉಳ್ಳ ವಿದ್ಯಾರ್ಥಿಗಳಿಗೆ ಹೆಚ್ಚು ಬರವಣಿಗೆ ಅಥವಾ ಅನಾಮಧೇಯತ್ವ (anonymous ways) ತಂತ್ರಗಳು ಹೆಚ್ಚು ಫಲಕಾರಿಯಾಗುತ್ತವೆ ಮತ್ತು ಎಲ್ಲ ತರಹದ ವಿದ್ಯಾರ್ಥಿಗಳಲ್ಲಿ ಆಸಕ್ತಿ ಮತ್ತು ಆತ್ಮಸ್ಥೈರ್ಯ ತುಂಬುತ್ತವೆ.

ಈ ಜಾಗತಿಕ ಯುಗದಲ್ಲಿ ಬಹುಭಾಷಾ ಕಲಿಕೆಯ ಮಹತ್ವ ಎಷ್ಟು ಹೇಳಿದರೂ ಸಾಲದು. Speaking more than one language boosts brain function. Bilingual and tri lingual speakers out perform who speaks only one language. It develops positive attitude and less prejudice towards people who are different. ಈ ಅಂಶಗಳನ್ನು ಅಧ್ಯಾಪಕರುಗಳು ಮನಗಂಡು ವಿದ್ಯಾರ್ಥಿಗಳನ್ನು ಬಹು ಭಾಷಾ ಕಲಿಕೆಗೆ ಉತ್ತೇಜನ ನೀಡಬೇಕು.

ಅಷ್ಟೇ ಮಹತ್ವವಾದ ಮತ್ತು ಅತ್ಯವಶ್ಯಕವಾದ ಬಹುಕಾರ್ಯ ನಿರ್ವಹಣಾ ಕೌಶಲ್ಯ (Multi Tasking skill) ಈ ಮಕ್ಕಳಲ್ಲಿ ಬೆಳೆಸುವುದು. ಈ ನಿಟ್ಟಿನಲ್ಲಿ ಹವ್ಯಾಸಗಳು (hobbies) ಇಂದಿನ ಮಾನಸಿಕ ಒತ್ತಡ ದೂರಮಾಡಿ Multi tasking ಕೌಶಲ್ಯಕ್ಕೆ ಸಹಾಯ ವಾಗುತ್ತದೆ. ಇವುಗಳು ವಿದ್ಯಾರ್ಥಿಗಳಲ್ಲಿ ಜೀವನದ ಕೌಶಲ್ಯಗಳ ಜೊತೆಗೆ ಕೆಲಸಕ್ಕೆ ಸಿದ್ಧವಾಗುವ (Job ready) ಸಾಮರ್ಥ್ಯವನ್ನು ಬೆಳೆಸುತ್ತದೆ.

ಇಂದಿನ ತಾಂತ್ರಿಕ ಮತ್ತು ಜಾಗತಿಕ ಯುಗದಲ್ಲಿ ಶಿಕ್ಷಕರ ಅತ್ಯುನ್ನತ ಮತ್ತು ಪ್ರಮುಖವಾದ ಕರ್ತವ್ಯವೆಂದರೆ ವಿದ್ಯಾರ್ಥಿಗಳಲ್ಲಿ ಈ ಕೆಳಕಂಡ ಅಂಶಗಳನ್ನು ಪಠ್ಯ ಮತ್ತು ಪಠ್ಯೇತರ ಸಂದರ್ಭಗಳಲ್ಲಿ ಮನದಟ್ಟು ಮಾಡಿಸುವುದು.

❖ ವಿಮರ್ಶಾತ್ಮಕ ಮತ್ತು ಸಹಾನುಭೂತಿಯ ಚಿಂತನೆ.
❖ ವ್ಯಕ್ತಿ, ಕುಟುಂಬ, ಸಮುದಾಯ, ರಾಷ್ಟ್ರಗಳ ಬಗ್ಗೆ ಗೌರವದ ಮೌಲ್ಯಗಳು.
❖ ತಾದಾತ್ಮ್ಯಾನುಭೂತಿ (Empathy)
❖ ಪರಿಸರ ಕಾಳಜಿ CCE – Climate Change Education ಹವಾಮಾನ ವೈಪರೀತ್ಯದ ಶಿಕ್ಷಣ
❖ ಪ್ರಸ್ತುತ ಜಾಗತಿಕ ಜ್ವಲಂತಸಮಸ್ಯೆಗಳ ಬಗ್ಗೆ ಅರಿವು
❖ ಯುದ್ಧ ಮತ್ತು ಅದರ ಘೋರ ಪರಿಣಾಮಗಳು
❖ ವಿಶ್ವಶಾಂತಿ ಮತ್ತು ಅದರ ಅನಿವಾರ್ಯತೆ
❖ ಜಾಗಾತಿಕ ಪ್ರಜ್ಞೆ
❖ ಏಕತೆ ಮತ್ತು ಒಳಗೊಳ್ಳುವಿಕೆ (One ness and inclusivity)

ಶಿಕ್ಷಣ ಕ್ರಿಯಾತ್ಮಕ ಮತ್ತು ಪ್ರಗತಿಶೀಲವಾಗಬೇಕಾದರೆ ಶಿಕ್ಷಕರ ಪಾತ್ರ ಬಹು ಮುಖ್ಯವಾಗಿರುತ್ತದೆ. ಶಿಕ್ಷಕರು ಶಿಕ್ಷಣಕ್ಕೆ ಮತ್ತು ಶಿಕ್ಷಣ ಸಂಸ್ಥೆಗಳ ಆತ್ಮವಿದ್ದಂತೆ. ಅವರು ಮಾತ್ರ ಉತ್ತಮ ಶಿಕ್ಷಣ ವ್ಯವಸ್ಥೆಯನ್ನು ಮುನ್ನಡೆಸಬಲ್ಲರು.

"Education must build character, enable learners to be ethical, compassionate and caring. While at the same time prepare them for gainful and fulfilling employment."

ಆರೋಗ್ಯ

# ವಚನ ಸಾಹಿತ್ಯದಲ್ಲಿ ಆಹಾರ ಪದ್ಧತಿ

– ಡಾ. ಪಿ.ಎಸ್. ಶಂಕರ್
ಗುಲ್ಬರ್ಗಾ

ನಮ್ಮೆಲ್ಲರ ಜೀವನದ ಸುಖ-ಸಂತೋಷ ಜಠರ-ಕರುಳಿನ ಪಚನಾಂಗದ ಮೂಲಕ ದೊರೆಯುತ್ತದೆ. ಅದಕ್ಕೆ ಆಹಾರವೇ ಮೂಲ. ಉತ್ತಮ ಆಹಾರ ಸೇವನೆಯಿಂದ ವ್ಯಕ್ತಿ ಸದೃಢವಾಗಿ ಬೆಳವಣಿಗೆ ಹೊಂದುತ್ತಾನೆ. ತನ್ಮೂಲಕ ಆರೋಗ್ಯ ಹೊಂದಿ ರೋಗ-ರುಜಿನಗಳನ್ನು ಎದುರಿಸುವ ಸಾಮರ್ಥ್ಯವನ್ನು ಪಡೆಯುತ್ತಾನೆ. ವ್ಯಕ್ತಿಯೇ ಜಗತ್ತಿನ ಒಂದು ಘಟಕವಾಗಿರುವುದರಿಂದ ಅವರೆಲ್ಲರ ಗುಂಪು ಜನಾಂಗವಾಗಿ ಪರಿಣಮಿಸುತ್ತದೆ. ಅವರ ಆರೋಗ್ಯ ಸ್ಥಿತಿಗೆ ಒಳ್ಳೆಯ ಆಹಾರ ಅತ್ಯವಶ್ಯಕವಾಗಿದೆ.

**ಆಹಾರದ ಕಾರ್ಯ**

ಆಹಾರವು ದೇಹದ ಬೆಳವಣಿಗೆ, ಅದರ ಕಾರ್ಯಶಕ್ತಿ ಮತ್ತು ರಕ್ಷಣೆಗೆ ಪೋಷಕವಾಗಿದ್ದು ದೇಹದ ಆರೋಗ್ಯವನ್ನು ಕಾಪಾಡುತ್ತದೆ. ಆಹಾರವು ದೇಹದ ಎಲ್ಲ ಅಂಗಭಾಗಗಳಿಗೆ ತಮ್ಮ ದೈನಂದಿನ ಕಾರ್ಯವನ್ನು ನಿರ್ವಹಿಸಲು ಬೇಕಾದ ಶಕ್ತಿಯನ್ನು ಒದಗಿಸುತ್ತದೆ. ಸ್ನಾಯುಗಳನ್ನು ಕಾರ್ಯಚಟುವಟಿಕೆಗಳಿಗೆ ಅಣಿಗೊಳಿಸುತ್ತದೆ. ದೈಹಿಕ ಉಷ್ಣತೆಯನ್ನು ಕಾಯ್ದಿರಿಸುತ್ತದೆ. ಆಹಾರ ನಮ್ಮ ಹಸಿವೆಯನ್ನು ಹಿಂಗಿಸಿ ತೃಪ್ತಿಯನ್ನು ಕೊಡುತ್ತದೆ. ಅದು ದೇಹರಚನೆಯನ್ನಲ್ಲದೆ, ಅದರ ಕಾರ್ಯಚಟುವಟಿಕೆಯಿಂದ ಉಂಟಾದ ಸವಕಳಿಯನ್ನು ಭರ್ತಿ ಮಾಡಲು ಸಹಾಯಕವಾಗುತ್ತದೆ. ದೇಹದಾರ್ಢ್ಯವನ್ನು ಹೆಚ್ಚಿಸಿ ರೋಗರುಜಿನಗಳ ಪ್ರಭಾವದಿಂದ ದೇಹವನ್ನು ರಕ್ಷಿಸುತ್ತದೆ.

ನಮ್ಮ ಆಹಾರವು ಗಟ್ಟಿ ಪದಾರ್ಥ, ತೆಳು ಪದಾರ್ಥ ಮತ್ತು ದ್ರವರೂಪಿ ವಸ್ತುಗಳಿಂದ ಕೂಡಿದೆ. ಆಹಾರವನ್ನು ಪಚನಗೊಳಿಸಿ ಅವುಗಳನ್ನು ಹೀರಿಕೊಳ್ಳುವ ಕಾರ್ಯಕ್ಕೆ ಪಚನಿಕ ನಾಳ ದೇಹದಲ್ಲಿ ವ್ಯವಸ್ಥಿತಗೊಂಡಿದೆ. ಅಲ್ಲದೆ ಅದು ಪಚನಗೊಳ್ಳದ ವಸ್ತುಗಳನ್ನು ಮತ್ತು ಕಸ ವಸ್ತುಗಳನ್ನು ಮಲದ ರೂಪದಲ್ಲಿ ದೇಹದಿಂದ ಹೊರಹಾಕುವ ಕಾರ್ಯವನ್ನು ನಿರ್ವಹಿಸುತ್ತದೆ. ಈ ಕಾರ್ಯಕ್ಕೆ ಇರುವ ಅಂಗಭಾಗಗಳು ಬಾಯಿ, ಗಂಟಲು, ಅನ್ನನಾಳ, ಜಠರ, ಸಣ್ಣ ಮತ್ತು ದೊಡ್ಡ ಕರುಳು ಮತ್ತು ಗುದ. ಅದಕ್ಕೆ ಸಹಾಯಕ ಅಂಗಗಳಾದ ಈಲಿ (ಲಿವರ್) ಮತ್ತು ಮೇದೋಜೀರಕ (ಪ್ಯಾಂಕ್ರಿಯಾಸ್) ಕರುಳಿನೊಳಕ್ಕೆ ತಮ್ಮ ತಯಾರಿಕೆಗಳನ್ನು ಸ್ರವಿಸುತ್ತವೆ.

**ಪಚನ ಕಾರ್ಯ**

ನಾವು ಉಣ್ಣುವ ಆಹಾರ ದೇಹದ ಎಲ್ಲ ಅಂಗಭಾಗಗಳ ಮೇಲೆ ಒಂದೇ ಬಗೆಯಾದ ಪ್ರಭಾವ ಬೀರುತ್ತದೆ. ಚೆನ್ನಬಸವಣ್ಣನವರು ಈ ಅಂಶವನ್ನು ಪುಷ್ಟೀಕರಿಸುತ್ತ 'ಜಿಹ್ವೆಯಲ್ಲಿ ಉಂಡರಸ ಸರ್ವೇಂದ್ರಿಯಕ್ಕೆ ಬೇರೆಯಾಗಬಲ್ಲುದೆ?' ಎಂದು ಪ್ರಶ್ನಿಸುತ್ತಾರೆ. ಅದಕ್ಕೆ ಗಂಡ ಭೇರುಂಡ ಪಕ್ಷಿಯ ಉಪಮೆಯನ್ನು ನೀಡಿ, ಅದರ ಒಂದು ಬಾಯಿಗೆ ಹಾಲು, ಮತ್ತೊಂದಕ್ಕೆ ವಿಷ ನೀಡಿದರೆ ಅದು ಬದುಕಬಹುದೇ? ಎಂದು ಹೀಗೆ ಪ್ರಶ್ನಿಸುತ್ತಾರೆ.

**ಗಂಡಭೇರುಂಡವೆಂಬ ಪಕ್ಷಿಗೆ**
**ತಲೆ ಎರಡು, ದೇಹವೊಂದು**
**ಒಂದು ತಲೆಯಲ್ಲಿ ಹಾಲನೆರೆದು**
**ಒಂದು ತಲೆಯಲ್ಲಿ ವಿಷವನೆರೆದರೆ**
**ಆ ಪಕ್ಷಿಗೆ ಮರಣವಿಲ್ಲದೆ**
**ಜಯವಪ್ಪುದೇ ಅಯ್ಯಾ?**

ಗಂಡ ಭೇರುಂಡ ಪಕ್ಷಿಯ ಯಾವುದೇ ಬಾಯಲ್ಲಿ ಆಹಾರವನ್ನು ನೀಡಿದರೂ ಅದು ದೇಹ ಪುಷ್ಟಿಯನ್ನೊದಗಿಸುತ್ತದೆಯೆಂದು ಅವಸರದ ಲೆಂಕಣ್ಣ ನುಡಿದಿದ್ದಾನೆ.



**ಗಂಡ ಭೇರುಂಡ ಪಕ್ಷಿಯಂತೆ**
**ಆವ ಬಾಯಲ್ಲಿ ಆಹಾರವ ಕೊಂಡಡೂ**
**ಘಟವೊಂದರಲ್ಲಿ ಆತ್ಮಸುಖವನೆಯ್ದುವಂತೆ.**

ನಾವು ಸ್ವೀಕರಿಸುವ ಆಹಾರ ಪದಾರ್ಥವೆಲ್ಲವೂ ಬಾಯಿ ಮೂಲಕ ಒಳ ಸೇರುತ್ತದೆ. ಪಚನಿಕ ವ್ಯವಸ್ಥೆ ಬಾಯಿಂದ ಮಲದ್ವಾರದವರೆಗೆ ಒಂಬತ್ತು ಮೀಟರ್ ಉದ್ದವಾಗಿದೆ. ಬಾಯಿಂದ ಆಹಾರ ಕೊಡದೆ ದೇಹದ ಹೊರಗೆ ಎಲ್ಲ ಆಹಾರ ವಸ್ತುಗಳನ್ನು ತಂದಿರಿಸಿದರೆ ಏನು ಫಲ ಎಂದು ಚೆನ್ನಬಸವಣ್ಣನವರು ಈ ರೀತಿ ಪ್ರಶ್ನಿಸುತ್ತಾರೆ:

**ದೇಹದ ಮೇಲೆ ಸಕಲ ಪದಾರ್ಥವ ತಂದಿರಿಸಿದರೆ**
**ಆತ್ಮನು ತೃಪ್ತನಾಗಬಲ್ಲನೆ, ಜಿಹ್ವೆಯ ಮುಖದಲ್ಲಿ**
**ತೃಪ್ತನಹನಲ್ಲವೆ.**

ಈ ಮಾತನ್ನು ಬಸವಣ್ಣನವರು 'ಸಕ್ಕರೆಯ ಕೊಡವ ತುಂಬಿ ಹೊರಗೆ ಸವಿದಡೆ ರುಚಿಯುಂಟೇ?' ಎಂದು ಕೇಳಿದರೆ, ಪ್ರಭುದೇವರು 'ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದಡೇನು? ಹಸಿವು ಹೋಹುದೆ?' ಎಂದು ಪ್ರಶ್ನಿಸಿದ್ದಾರೆ.

ನಾವು ಹಸಿದಾಗ, ನೀರಡಿಸಿದಾಗ ವಿಷ ವಸ್ತುಗಳನ್ನು ಸೇವಿಸಿ ನಮ್ಮ ಹಸಿವೆಯನ್ನು, ಬಾಯಾರಿಕೆಯನ್ನು ಹಿಂಗಿಸಿಕೊಳ್ಳುವುದಿಲ್ಲ ಎಂಬುದನ್ನು ಬಸವಣ್ಣನವರು ಹೀಗೆ ಹೇಳಿದ್ದಾರೆ.

**ಹಸಿದು ಎಕ್ಕೆಯ ಕಾಯ ಮೆಲಬಹುದೇ?**
**ನೀರಡಿಸಿ ವಿಷವ ಕುಡಿಯಬಹುದೇ?**

ಅದೇ ಮಾತನ್ನು ಸಿದ್ಧರಾಮೇಶ್ವರರು,

**ಸುಗಂಧ ಎಣ್ಣೆ ನೀರಡಿಕೆಗೆ ಕುಡಿಯಬಹುದೆ?**

ಎಂದು ಕೇಳುತ್ತಾರೆ.

ಮನುಷ್ಯನ ಎಲ್ಲ ಶ್ರಮ ಆತನ ಬಾಯಿಗೆ, ಆದರೂ ಆತನ ಹಸಿವೆ ಹಿಂಗಿಲ್ಲ ಎಂದು ಬೈಬಲ್ ಹೇಳುತ್ತದೆ. ದೇಹಕ್ಕೆ ಅನ್ನ-ನೀರಿನ ಮಹತ್ವವನ್ನು ಸಾರುತ್ತ ಸಿದ್ಧರಾಮೇಶ್ವರರು –

**ಜನನ-ಮರಣ ದೇಹಧರ್ಮ**
**ಕ್ಷುಧಾ-ತೃಷೆ ಪ್ರಾಣಧರ್ಮ**

ಎಂದಿದ್ದಾರೆ. ಆಹಾರವನ್ನು ಬಾಯಿಂದ ಸೇವಿಸಿ ನಮ್ಮ ಹಸಿವು ಹಿಂಗಿಸಿಕೊಂಡು ಜೀವನದ ಸುಖ ಪಡೆಯಬೇಕು ಎಂಬುದನ್ನು ಚೆನ್ನಬಸವಣ್ಣನವರು ಹೀಗೆ ನುಡಿದಿದ್ದಾರೆ–

**ತಂಗಳು ಬುತ್ತಿಯ ಕಟ್ಟಿ ಹೊಟ್ಟೆಯ ಮೇಲಕ್ಕೆ**
**ಕೊಂಡಿರ್ದಡೆ**
**ಹಸಿವು ಹೋಗಿ ಆಪ್ಯಾಯನವಹುದೆ?**

ಈ ವಿಷಯವನ್ನು ಪ್ರಸ್ತಾಪಿಸಿ ಅಮುಗಿದೇವಯ್ಯ 'ಇಷ್ಟಾನ್ನವ ನೆನೆದಡೆ ಹೊಟ್ಟೆ ತುಂಬುವುದೆ?' ಎಂದು ಕೇಳಿದ್ದಾರೆ.

**ಆಹಾರದ ಆವಶ್ಯಕತೆ**

ಆಹಾರದ ವಿಷಯವನ್ನು ಗರ್ಭಿಣಿ ಸ್ತ್ರೀಗೆ ಅನ್ವಯಿಸಿ ಹೇಳುತ್ತ, ಆಕೆ ಆಹಾರ ಸೇವಿಸಿ ತನ್ನ ಗರ್ಭದಲ್ಲಿ ಬೆಳೆಯುತ್ತಿರುವ ಕೂಸಿಗೆ ಪುಷ್ಟಿಯನ್ನು ಒದಗಿಸಬಲ್ಲಳು. ಆಹಾರ ವಸ್ತುವನ್ನು ಹೊಟ್ಟೆಯ ಮೇಲಿರಿಸಿದರೆ ಕೂಸಿಗೆ ಅದು ನಿರುಪಯುಕ್ತ ಎಂಬುದನ್ನು ಚೆನ್ನಬಸವಣ್ಣನವರು ಹೀಗೆ ವಿಶ್ಲೇಷಿಸಿದ್ದಾರೆ –

**ಗರ್ಭಿಣಿ ಸ್ತ್ರೀಗೆ ಉಣಲಿಕ್ಕಿದರೆ ಆ ಗರ್ಭದೊಳಗಣ ಶಿಶು**
**ತೃಪ್ತವಹುದಲ್ಲದೆ,**
**ಆ ಸ್ತ್ರೀಯ ಗರ್ಭದ ಮೇಲೆ**
**ಸಕಲ ಪದಾರ್ಥಂಗಳನಿಕ್ಕಿದಡೆ ಆ ಗರ್ಭದೊಳಗಣ**
**ಶಿಶು ತೃಪ್ತನಾಗಬಲ್ಲುದೆ?**

ನಮ್ಮ ಪ್ರಾಣವನ್ನು ಸಲಹಲು ಅನ್ನ ಸೇವನೆ ಅತ್ಯಗತ್ಯವೆಂಬುದನ್ನು ಒತ್ತಿ ಹೇಳುತ್ತ ಪ್ರಭುದೇವರು, 'ಕಾಯಕ್ಕೆ ಮಜ್ಜನ ಪ್ರಾಣಕ್ಕೆ ಓಗರ' ಮಾಡಲೇ ಬೇಕೆಂದಿದ್ದಾರೆ. ನಮ್ಮ ಪಚನ ಕ್ರಿಯೆಯನ್ನು ವಿವರಿಸುತ್ತ ಪ್ರಭುದೇವರು ಜಠರದ ಕಾರ್ಯದ ಬಗ್ಗೆ ಹೀಗೆ ಹೇಳಿದ್ದಾರೆ:

**ಕಾಯವೆಂಬ ಗ್ರಾಮದೊಳಗೊಂದು ಉದರಾಗ್ನಿ**
**ಹಸಿವು ತೃಷೆ ಅನ್ನ ಪಾನಾದಿಗಳಾಹುತಿಯೆಂಬ ಹೇಮದ**
**ಕುಳಿಯಿದ್ದು.**

ನಮ್ಮ ಆಹಾರ ಸೇವನೆ- ಅದರ ತ್ಯಾಜ್ಯದ ವಿಸರ್ಜನೆಯನ್ನು ಪ್ರಭುದೇವರು ವಿವರಿಸುವುದು ಹೀಗೆ:

**ಜಿಹ್ವೆಯ ಮುಖದಿಂದುಂಡು ಗುಹ್ಯದ್ವಾರದಿಂ ಬಿಡುವವ**

ಆಹಾರದ ರುಚಿಯನ್ನು ನಾವು ಬಾಯಿ ಮೂಲಕ ಸೇವಿಸಿ ಅದರ ರುಚಿಯನ್ನು ಸವಿಯುತ್ತೇವೆ. ಆಹಾರ

ಪಚನಗೊಂಡು ದೇಹಕ್ಕೆ ಪುಷ್ಟಿಯನ್ನೊದಗಿಸುತ್ತದೆ. ಪಚನಗೊಳ್ಳದ ಆಹಾರ ತ್ಯಾಜ್ಯ ವಸ್ತುವಾಗಿ ಗುದದ ಮೂಲಕ ವಿಸರ್ಜಿಸಲ್ಪಡುತ್ತದೆ. ಆದರೆ ಆ ದ್ವಾರದ ಮೂಲಕ ಸೇವಿಸಲಾಗದು ಎಂಬ ದೇಹಧರ್ಮವನ್ನು ಅರಿವಿನ ಮಾರಿತಂದೆ ವಿವರಿಸಿರುವುದು ಹೀಗೆ :

**ತಲೆಯೊಳಗಣ ಬಾಯಲ್ಲಿ ಹಲವು ರುಚಿಯುಲ್ಲದೆ**
**ಕೆಳಗಣ ದ್ವಾರದಲ್ಲಿ ಉಣಬಹುದೆ ಅಯ್ಯಾ?**

ಬಾಯಿ ಮೂಲಕ ಸೇವಿಸಿದ ಆಹಾರವನ್ನು ಹಿಡಿದಿಟ್ಟು ಜಗಿಯಲು, ನುರಿಸಲು, ಕತ್ತರಿಸಲು ಸ್ಥಳ ಬೇಕೆಂಬುದನ್ನು ಮೋಳಿಗೆ ಮಾರಯ್ಯ ಹೀಗೆ ಹೇಳಿದ್ದಾನೆ: 'ಕುಕ್ಷಿಯಿಲ್ಲದಿರೆ ಬಾಯಿ ಉಣಬಲ್ಲುದೆ?'

**ಅನ್ನರಸ**

ಜಠರಕೋಶ ಮತ್ತು ಕರುಳು ಯಾವ ರೀತಿ ಕಾರ್ಯ ಮಾಡುತ್ತವೆ ಎಂಬುದನ್ನು ತಿಳಿಯದ ಕಾಲದಲ್ಲಿ ಶರಣರು ಅನ್ನರಸ ದೇಹಕ್ಕೆ ಶಕ್ತಿಯನ್ನೊದಗಿಸುತ್ತದೆ ಎಂಬುದನ್ನು ವಿವರಿಸಿದ್ದುದು ನಿಜಕ್ಕೂ ಸೋಜಿಗ. ಅಮೆರಿಕೆಯ ಸೇನಾವೈದ್ಯ ವಿಲಿಯಂ ಬ್ಯೂಮಾಂಟ್ ೧೮೨೨ರಲ್ಲಿ ಜಠರಕ್ಕೆ ಗುಂಡೇಟು ತಗುಲಿ ಅದನ್ನು ರಂಧ್ರವಾಗಿ ತೆರೆದಿರಿಸಿದ್ದ ಅಲೆಕ್ಸಿಸ್ ಸೇಂಟ್ ಮಾರ್ಟಿನ್ ಮೇಲೆ ಕೈಕೊಂಡ ಅಧ್ಯಯನದ ವಿವರಗಳನ್ನು ೧೮೩೩ರಲ್ಲಿ ಪ್ರಕಟಿಸುವವರೆಗೆ ಜಠರ ರಸ ಮತ್ತು ಪಚನ ಕ್ರಿಯೆಗಳು ನಿಗೂಢವಾಗಿ ಉಳಿದಿದ್ದವು. ಜಠರ ರಸದ ಸ್ರವಿಕೆಗೆ ಅಲ್ಲಿ ಆಹಾರ ಇರುವ ಆವಶ್ಯಕತೆಯನ್ನು ಆ ಶೋಧ ತೋರಿಸಿಕೊಟ್ಟಿತು.

ಮುಂದೆ ರಶಿಯಾದ ಪಾವ್‌ಲೋವ್ ಈ ಜಠರ ರಸ ದೃಷ್ಟಿ, ವಾಸನೆ, ರುಚಿ ನೀಡುವ ಪ್ರಚೋದನೆಗಳಿಂದ ಸ್ರವಿಸಲ್ಪಡುವುದನ್ನು ತೋರಿಸಿಕೊಟ್ಟು ೧೯೦೪ರಲ್ಲಿ ನೊಬೆಲ್ ಪ್ರಶಸ್ತಿಗೆ ಪಾತ್ರರಾದರು. ಈ ಹಿನ್ನೆಲೆಯಲ್ಲಿ ೧೨ನೇ ಶತಮಾನದಲ್ಲಿ ಶರಣರು ಉಂಡ ರಸ ದೇಹಕ್ಕೆ ಹೇಗೆ ಉಪಯುಕ್ತ ಎಂಬುದನ್ನು, ಪ್ರಾಣಕ್ಕೆ ಓಗರ ಬೇಕೆಂಬುದನ್ನು ತಿಳಿದಿದ್ದುದು ಅವರ ಜ್ಞಾನದ ಆಳಕ್ಕೆ ಸಾಕ್ಷಿ. ಉದರಾಗ್ನಿಯಲ್ಲಿ ಅನ್ನ-ಪಾನಾದಿಗಳು ಆಹುತಿಯಾಗುವುದನ್ನು ಅವರು ಮನಗಂಡಿದ್ದರು.

**ಪ್ರಾಣ ಪಂಚಕ**

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ವಾಯುಗಳು ಪ್ರಾಣ ಪಂಚಕಗಳೆಂದು ಚೆನ್ನಬಸವಣ್ಣನವರು ಪರಿಗಣಿಸಿದ್ದಾರೆ. ಅವರು ಜೀವಿಸಿದ್ದ ೧೨ನೇ ಶತಮಾನದಲ್ಲಿ ಉಸಿರಾಟ ಕ್ರಿಯೆ, ಪಚನ ಕ್ರಿಯೆ, ರಕ್ತ ಪರಿಚಲನೆ -ಇವಾವುವೂ ವೈದ್ಯರಂಗದಲ್ಲಿ ಪರಿಚಿತ ವಾಗಿರಲಿಲ್ಲ. ಅಂತಹ ಕಾಲದಲ್ಲಿ ಚೆನ್ನಬಸವಣ್ಣನವರು ಉಸಿರಾಟದ ಉಚ್ಛ್ವಾಸ-ನಿಶ್ವಾಸ, ಆಹಾರ ಪಚನ, ಲೋಮನಾಳಗಳ ಮೂಲಕ ಅನ್ನರಸದ ಹೀರಿಕೆ ಮತ್ತು ಅದರಿಂದ ದೇಹ ಪುಷ್ಟಿ ದೊರೆಯುವುದರ ಬಗ್ಗೆ ತಿಳಿವಳಿಕೆ ಹೊಂದಿದ್ದುದು ನಿಜಕ್ಕೂ ಅಗಾಧ.

**ಪ್ರಾಣವಾಯು** : ಪ್ರಾಣವಾಯು ನಮ್ಮ ಎಲ್ಲ ಜೀವಂತ ಕಾರ್ಯಕ್ರಿಯೆಗಳಿಗೆ ಮೂಲಾಧಾರ. ಅದರ ಕಾರ್ಯಕ್ಕೆ ಒತ್ತಾಸೆ ಕೊಡುವುದು 'ಹೃದಯಸ್ಥಾನ'ದಲ್ಲಿದೆ. ಅದರ ಪ್ರಭಾವ ಹೆಬ್ಬೆರಳ ತುದಿಯಿಂದ ಮೂಗಿನ ತುದಿಯವರೆಗೂ ಇದ್ದು ಅದು ಚೈತನ್ಯದಾಯಕವಾಗಿ ಕಾರ್ಯನಿರ್ವಹಿಸುತ್ತದೆ. ಅದರಿಂದಾಗಿಯೇ ಅನ್ನ ಪಚನ ಕಾರ್ಯವು ಜರುಗುತ್ತದೆ.

**ಅಪಾನವಾಯು** : ಅಪಾನವಾಯು, ಗುದಸ್ಥಾನ ದಲ್ಲಿದ್ದು ಗುದದ ಮೂಲಕ ಮಲವನ್ನು, ಮೂತ್ರನಾಳದ ಮೂಲಕ ಮೂತ್ರವನ್ನು ವಿಸರ್ಜನೆ ಮಾಡುವ ಅವಕಾಶ ಮಾಡಿಕೊಡುತ್ತದೆ. ಕರುಳಿನಲ್ಲಿ ಅನ್ನರಸ ಹೀರಲ್ಪಟ್ಟ ಮೇಲೆ ಉಳಿಯುವ ವಸ್ತು ಮಲವಾಗಿ ನೆಟ್ಟಗರುಳಿನಲ್ಲಿ ಸಂಗ್ರಹಗೊಳ್ಳುತ್ತದೆ. ಅದೇ ರೀತಿ ಮೂತ್ರ ವಿಸರ್ಜನೆಗೆ ಮುನ್ನ ಮೂತ್ರಕೋಶದಲ್ಲಿ ಸಂಗ್ರಹಗೊಳ್ಳುತ್ತದೆ. ಈ ತ್ಯಾಜ್ಯ ವಸ್ತುಗಳನ್ನು ದೇಹ ಅಧೋದ್ವಾರಗಳಾದ ಗುದ ಮತ್ತು ಗುಹ್ಯಗಳ ಮೂಲಕ ಆಗಾಗ್ಗೆ ವಿಸರ್ಜಿಸುತ್ತವೆ. ಈ ರೀತಿ ತ್ಯಾಜ್ಯ ವಸ್ತುಗಳನ್ನು ವಿಸರ್ಜಿಸುವ ಕ್ರಿಯೆಗಳಿಂದಾಗಿ ಹಸಿವು, ನೀರಡಿಕೆ ಉಂಟಾಗುತ್ತವೆ.

**ವ್ಯಾನವಾಯು** : ವ್ಯಾನವಾಯು ದೇಹದ ಎಲ್ಲ ಭಾಗಗಳಲ್ಲಿ ಪಸರಿಸಿದ್ದು ಅದು ನಾಡಿಗಳಲ್ಲಿ ಅನ್ನಪಾನವನ್ನು ತುಂಬಿಸುವ ಕೆಲಸ ಮಾಡುತ್ತದೆ. ದೇಹ ತನ್ನೊಳಗೆ ತೆಗೆದುಕೊಂಡ ಆಹಾರ ಪಾನೀಯಗಳನ್ನು ಪಚನಗೊಳಿಸಿದ ಮೇಲೆ ಅವುಗಳನ್ನು ಕರುಳಿನಿಂದ ಹೀರಿ ಆ ರಸವನ್ನು ದೇಹದ ಒಳಿತಿಗೆ ಪೂರೈಸುತ್ತದೆ.

**ಉದಾನವಾಯು** : ಉದಾನವಾಯುವಿನ ಸ್ಥಾನ ಕಂಠದಲ್ಲಿ ಎಂದರೆ ಗಂಟಲಿನಲ್ಲಿನ ದನಿಪೆಟ್ಟಿಗೆಯಲ್ಲಿ. ಆ ಹಾದಿಯ ಮೂಲಕ ಸೀನು, ಕೆಮ್ಮು, ಶ್ವಾಸೋಚ್ಛಾರಣೆ ಜರುಗುತ್ತದೆ. ಚೆನ್ನಬಸವಣ್ಣನವರ ಪ್ರಕಾರ ಅದು ಸ್ವಪ್ನಾವಸ್ಥೆಯನ್ನು ಉಂಟುಮಾಡುವ, ರಾತ್ರಿಯೂಟ



ಪಚನವಾಗದಿದ್ದಲ್ಲಿ ವಾಂತಿ ಮಾಡಿರುವ ಕಾರ್ಯ ನಿರ್ವಹಿಸುತ್ತದೆ. ನಂತರ ಪಚನಿಕ ನಾಳದಲ್ಲಿ ಉಳಿದ ಅನ್ನ ನೀರನ್ನು ಅನ್ನರಸವನ್ನಾಗಿ ಪರಿವರ್ತನೆ ಮಾಡುತ್ತದೆ.

**ಸಮಾನವಾಯು** : ಸಮಾನವಾಯುವಿನ ಶಕ್ತಿ ಹೊಕ್ಕುಳ ಪ್ರದೇಶದಲ್ಲಿದ್ದು ಉಂಡ ಆಹಾರ ಉದರಾಗ್ನಿ ಯಲ್ಲಿ ಪಚನಗೊಂಡು ದೇಹಕ್ಕೆ ಆವಶ್ಯಕವಾದ ರಸವಾಗುವುದು. ಉಳಿದವು ಕೆಟ್ಟವೆಂದು ತ್ಯಾಜ್ಯ ವಸ್ತುವಾಗಿ ಗುದ-ಗುಹ್ಯಗಳ ಮೂಲಕ ಮಲ-ಮೂತ್ರದ ರೂಪದಲ್ಲಿ ವಿಸರ್ಜಿಸಲ್ಪಡುತ್ತವೆ. ಪಚನಗೊಂಡ ಅನ್ನರಸವನ್ನು ದೇಹದ ಎಲ್ಲ ಕಡೆ ಕೊಂಡೊಯ್ಯಲು ಅದನ್ನು ಲೋಮ (ರೋಮ) ನಾಳದೊಳಕ್ಕೆ ಕಳುಹಿಸುವುದು. ಅನ್ನರಸ ಹೇಗೆ ಪಚನಿಕನಾಳದ ಲೋಳ್ಪರೆಯ ಮೂಲಕ ರಕ್ತನಾಳ ಮತ್ತು ಹಾಲ್ರಸನಾಳಗಳ ಕವಲುಗಳೊಳಕ್ಕೆ ಸೇರಿ ದೇಹಕ್ಕೆ ಪುಷ್ಟಿಯನ್ನು ಹಂಚುತ್ತಿದ್ದಿತೆಂಬುದನ್ನು ಚೆನ್ನಬಸವಣ್ಣ ನವರು ಆಗ ಮನಗಂಡಿದ್ದುದು ಆಶ್ಚರ್ಯ.

ಪಚನಿಕನಾಳದ ಬಗ್ಗೆ ಕ್ರಿ.ಪೂ. ಆರನೇ ಶತಮಾನ ದಲ್ಲಿ ಈಸೋಪನು ಒಂದು ನೀತಿಕತೆಯನ್ನು ರಚಿಸಿದ್ದ. ಅದರ ಪ್ರಕಾರ ದೇಹದ ಸದಸ್ಯರು ಒಮ್ಮೆ ಹೊಟ್ಟೆಯ ವಿರುದ್ಧ ದಂಗೆಯೆದ್ದರು. 'ನಾವು ಏಕೆ ಸದಾ ಅದರ ಬೇಡಿಕೆಗಳನ್ನು ಪೂರೈಸಲು ದುಡಿಯಬೇಕು. ಅದು ಮಾತ್ರ ಯಾವ ಕೆಲಸ ಮಾಡದೆ ವಿಶ್ರಾಂತಿ ಪಡೆಯುತ್ತ ಶ್ರೀಮಂತಿಕೆಯ ಸೌಲಭ್ಯಗಳನ್ನು ಅನುಭವಿಸಬೇಕು' ಎಂದು ಕೂಗುತ್ತ ತಮ್ಮ ನಿರ್ಧಾರವನ್ನು ಕಾರ್ಯರೂಪಕ್ಕೆ ತಂದರು. ಅವರ ಹರತಾಳದಿಂದ ಹೊಟ್ಟೆಗೆ ಯಾವ ಸಹಾಯವೂ ದೊರೆಯದಾಯಿತು. ಇಡೀ ದೇಹ ಬೇಗನೆ ಸುಸ್ತಾಗಿ ಹೋಯಿತು. ಕೈಗಳು, ಪಾದ, ಬಾಯಿ ಮತ್ತು ಕಂಗಳು ತಮ್ಮ ತಪ್ಪಿನ ಅರಿವು ಹೊಂದುವ ವೇಳೆಗೆ ತುಂಬಾ ತಡವಾಗಿದ್ದಿತು. ಪಚನಿಕನಾಳದ ಮೂಲಕ ದೇಹಕ್ಕೆ ಪುಷ್ಟಿ ದೊರೆಯುವುದನ್ನು ಚೆನ್ನಬಸವಣ್ಣನವರು ತಿಳಿದಿದ್ದಾರೆ.

**ಉಂಡಸುಖ**

ನಾವು ಊಟದಿಂದ ತೃಪ್ತಿ ಪಡೆಯುತ್ತೇವೆ. ಬಗೆಬಗೆಯ ಭಕ್ಷ್ಯ ಭೋಜ್ಯಗಳು ದೇಹಕ್ಕೆ ಬೇಕಾದ ಶಕ್ತಿಯನ್ನು ದೊರಕಿಸಿಕೊಡುತ್ತವೆ. ಉಣಿಸು ನಮ್ಮ ಹೊಟ್ಟೆಯನ್ನು ತುಂಬಿಸಿ ಸಂತೋಷವನ್ನು ದೊರಕಿಸಿ ಕೊಡುತ್ತದೆ ಎಂಬ ಸಂಗತಿಯತ್ತ ಅಕ್ಕಮಹಾದೇವಿ ಹೀಗೆ ಗಮನ ಸೆಳೆದಿದ್ದಾಳೆ.

**"ಉಣಲೆಂದು ಬಂದ ಸುಖ ಉಂಡಲ್ಲದೆ ಹರಿಯದು**
**ಹಾಗೆಯೇ ಊಟ ಮಾಡಿಯೂ ಹಸಿವಾಗಿದೆ ಎಂಬುದು**
**ವಿಪರ್ಯಾಸ**
**ಉಂಡು ಹಸಿವಾಯಿತೆಂದಡೆ ಭಂಗವೆಂಬೆ"**

**ಬೊಜ್ಜಿನ ಸ್ಥೂಲದೇಹ**

ಬೊಜ್ಜು ಇಂದು ಪಿಡುಗು ರೂಪ ಧರಿಸಿದ್ದು ಏರಿದ ದೈಹಿಕತೂಕ ಅನೇಕರ ಸಮಸ್ಯೆಯಾಗಿ ಪರಿಣಮಿಸಿದೆ. ಆದರೆ ಈ ಸ್ಥಿತಿಯನ್ನು ಜನಪದ ಪ್ರಾಚೀನ ಕಾಲದಿಂದಲೇ ಗುರುತಿಸಿ ಬೊಜ್ಜಿನಿಂದ ಸ್ಥೂಲಗೊಂಡ ದೇಹ ಹೇಗೆ ರೋಗದ ಬೀಡಾಗಿ ಅನಾರೋಗ್ಯಕರ ಸ್ಥಿತಿಯನ್ನುಂಟು ಮಾಡುತ್ತದೆಂಬುದರ ಬಗ್ಗೆ ಜನರ ಗಮನ ಸೆಳೆದಿದ್ದಿತು. ಅದಕ್ಕೆ ಈ ಗಾದೆಗಳೇ ಸಾಕ್ಷಿಯಾಗಿವೆ.

**'ಊಟ ಬಲ್ಲವಂಗೆ ರೋಗವಿಲ್ಲ'**
**'ಹಸಿವೆಯಿಂದ ಸಾಯುವವರಿಗಿಂತ ಉಂಡು ಸತ್ತವರ ಸಂಖ್ಯೆ ಹೆಚ್ಚು.'**
**'ಹೆಚ್ಚು ಉಣಿಸು ಹೆಚ್ಚು ರೋಗಗಳು'**
**'ಬಕಾಸುರ ತನ್ನ ಹಲ್ಲಿನಿಂದ ತನ್ನ ಗೋರಿಯನ್ನು ಅಗೆಯುತ್ತಾನೆ'**
**'ತುತ್ತು ತೂಕ ಕೆಡಿಸಿತು'**
**'ತುತ್ತು ತಪ್ಪಿದರೆ ತೂಕ ತಪ್ಪೀತು'**
**'ಎದೆ ಮೀರಿದ ಹೊಟ್ಟೆ'**
**'ನಾಲ್ಕೊತ್ತುಂಡವನನ್ನು ಹೊತ್ಕೊಂಡು ಹೋಗಿ'**
**'ಹೊಟ್ಟೆಯ ಸುತ್ತಳತೆ ಹೆಚ್ಚಿದರೆ ಆಯುಷ್ಯ ರೇಖೆ ಕಡಿಮೆಯಾಗುತ್ತದೆ.'**
**'ಉಪವಾಸ ಕೊಲ್ಲದು, ಹೊಟ್ಟೆಬಾಕತನ ಕೊಲ್ಲುತ್ತದೆ'**
**'ಕತ್ತಿಗಿಂತ ಹೆಚ್ಚು ಜನರನ್ನು ಹೊಟ್ಟೆಬಾಕತನ ಕೊಲ್ಲುತ್ತದೆ.'**
**'ಒಬ್ಬ ಮನುಷ್ಯ ಹಸಿವೆಯಿಂದ ಸಾಯುವುದಕ್ಕೆ ಮೊದಲು 'ನೂರು ಜನ ತಿಂದು ಸಾಯುತ್ತಾರೆ.'**
**'ಮನುಷ್ಯ ಏನು ತಿನ್ನುವನೋ ಹಾಗಿರುತ್ತಾನೆ'**
**'ಒಂದೇ ಊಟ ಮಾಡುವವನಿಗೆ ವೈದ್ಯ ಬೇಕಿಲ್ಲ'**
**'ಒಂದೇ ಬಗೆಯ ಆಹಾರ ಉಣ್ಣುವವನಿಗೆ ವೈದ್ಯನ ಅಗತ್ಯವಿಲ್ಲ.'**

**ಬೊಜ್ಜಿನ ದೇಹ**

ಬೊಜ್ಜಿನಿಂದ ಸ್ಥೂಲಗೊಂಡ ದೇಹದ ಘನರಾಶಿ ಸೂಚ್ಯಂಕ ೩೦ನ್ನು ಮೀರಿರುತ್ತದೆ. ಬೊಜ್ಜು ದೇಹದಲ್ಲಿ ಒಗ್ಗೂಡಿ ಬೀಳುವ ಪ್ರದೇಶವೂ ಮುಖ್ಯವೆನಿಸಿದೆ.





ಹೊಟ್ಟೆಯಲ್ಲಿ ಸಂಗ್ರಹಗೊಂಡ ಬೊಜ್ಜು ವ್ಯಕ್ತಿಗೆ ಸೇಬು ಹಣ್ಣಿನ ಆಕೃತಿಯನ್ನು ತಂದುಕೊಡುತ್ತದೆ. ಕೊಬ್ಬು ಚರ್ಮದಡಿಯ ಪ್ರದೇಶದಲ್ಲಿ ವ್ಯಾಪಕವಾಗಿ ಹರಡಿದಾಗ ಅದು ಪೇರು ಆಕೃತಿಯನ್ನು ಉಂಟುಮಾಡುತ್ತದೆ. ಸೇಬು ಆಕೃತಿಯನ್ನು ಗಂಡಸರು ವಿಶೇಷವಾಗಿ ಪಡೆದಿರುತ್ತಾರೆ. ಸೇಬು ಆಕೃತಿ ಸಕ್ಕರೆ ಕಾಯಿಲೆ, ರಕ್ತ ಏರೊತ್ತಡ, ಕೊಲೆಸ್ಟಿರಾಲ್ ಏರಿಕೆ, ಹೃದಯ-ರಕ್ತನಾಳ ರೋಗ, ಜೀವವಸ್ತುಕರಣ ಕ್ರಿಯೆ ಲಕ್ಷಣ ಕೂಟ, ನಿದ್ರಾಭಂಗ, ಉಬ್ಬಸ, ವಾತ, ಹಾರ್ಮೋನ್ ಆಧಾರಿತ ಕಾನ್ಸರ್‌ಗಳಿಗೆಡೆಮಾಡಿಕೊಟ್ಟು ವ್ಯಕ್ತಿ ಅದರಿಂದ ನರಳಿ ಮರಣ ಹೊಂದುವ ಸಂಭಾವ್ಯವನ್ನು ಹೆಚ್ಚಿಸುತ್ತದೆ.

ದೇಹದಲ್ಲಿ ಕೊಬ್ಬು ಸೇರ್ಪಡೆ, ದೇಹ ಆಹಾರ ಮೂಲದಿಂದ ಪಡೆದುಕೊಳ್ಳುವ ಶಕ್ತಿ ಮತ್ತು ಅದರ ವ್ಯಯದ ಮಧ್ಯ ಇರುವ ಸಮತೋಲನೆ ಇಲ್ಲದಿರುವುದರ ಫಲ. ದೇಹದ ಆವಶ್ಯಕತೆಗಿಂತ ಪ್ರತಿದಿನ ಸ್ವಲ್ಪ ಹೆಚ್ಚು ಆಹಾರ ಸೇವಿಸಿದರೂ ಹೆಚ್ಚಿನದೆಲ್ಲ ಖರ್ಚಾಗದೆ ಅದು ದೇಹದಲ್ಲಿ ಕೊಬ್ಬಿನ ರೂಪದಲ್ಲಿ ಒಗ್ಗೂಡುತ್ತದೆ.

### ಮಿತಭೋಜನ

ಈ ಸನ್ನಿವೇಶ ತಲೆದೋರದಂತೆ ಮಾಡಲು ಮತ್ತು ಬೊಜ್ಜು ಗೋಚರಿಸಿದ ಮೇಲೆ ಜೀವನಶೈಲಿಯಲ್ಲಿ ಮಾರ್ಪಾಟು ತರಬೇಕೆಂಬ ಸಲಹೆಯನ್ನು ನೀಡಲಾಗುತ್ತದೆ. ಅದರಲ್ಲಿ ಸೇವಿಸುವ ಆಹಾರವನ್ನು ಕಡಿಮೆ ಮಾಡಬೇಕು ಎಂಬುದು ಮಹತ್ವದ್ದು. ಈ ಅಂಶವನ್ನು ಹನ್ನೆರಡನೇ ಶತಮಾನದಲ್ಲಿ ಬಸವೇಶ್ವರರ ಸಮಕಾಲೀನ ಶರಣ-ಶರಣೆಯರು ಮನಗಂಡಿದ್ದರು ಎಂಬುದಕ್ಕೆ ಅವರ ವಚನಗಳೇ ಸಾಕ್ಷಿ. ಬಹುರೂಪಿ ಚೌಡಯ್ಯನೆಂಬ ಶರಣ 'ಮಿತ ಭೋಜನ ಮಿತ ವಾಕು ಮಿತ ನಿದ್ರೆಯ ಮಾಡಿರಣ್ಣ' ಎಂಬ ಸಾರ್ವಕಾಲಿಕ ಅನುಪಾನವನ್ನು ಆರೋಗ್ಯದ ಸೂತ್ರವಾಗಿ ನೀಡಿದ್ದ.

ಉಣ್ಣುವಾಗ ಜಠರದ ಮೂರನೇ ಒಂದು ಭಾಗ ಆಹಾರದಿಂದ ತುಂಬಿರಬೇಕು; ಮೂರನೇ ಒಂದು ಭಾಗ ದ್ರವದಿಂದ ಮತ್ತು ಉಳಿದದ್ದು ಖಾಲಿಯಿರಬೇಕು ಎಂದು ಸುಭಾಷಿತವೊಂದು ಹೇಳುತ್ತದೆ. ನಾವು ಆಹಾರ ಮೂಲದಿಂದ ದೊರಕಿಸಿಕೊಳ್ಳುವ ಶಕ್ತಿ ನಾವು ದೈನಂದಿನ ಕಾರ್ಯಚಟುವಟಿಕೆಗಳಿಗೆ ಖರ್ಚು ಮಾಡುವ ಶಕ್ತಿಯ ಮಧ್ಯೆ ಹೊಂದಾಣಿಕೆ ಇರಬೇಕು. ದೊರಕಿಸಿಕೊಂಡ ಆಹಾರದ ಮೂಲಕ ಶಕ್ತಿ ಹೆಚ್ಚಾದರೆ ಅದು ದೇಹವನ್ನು ಕೊಬ್ಬುಗೂಡಾಗಿಸುತ್ತದೆ. ಆಹಾರ ಕಡಿಮೆಯಾದರೆ ಅದು ಆರೋಗ್ಯವನ್ನು ಕಾಯ್ದಿರಿಸಿ ಆಯುಷ್ಯವರ್ಧನೆ ಮಾಡುತ್ತದೆ. ಈ ಅಂಶವನ್ನು ಹನ್ನೆರಡನೇ ಶತಮಾನದಷ್ಟು ಹಿಂದೆ ಅಕ್ಕಮಹಾದೇವಿ ಮನಗಂಡಿದ್ದರು. ಅವರ ಈ ಕೆಳಕಂಡ ವಚನ ಅದನ್ನು ಪುಷ್ಟೀಕರಿಸುತ್ತದೆ.

**ಆಹಾರ ಕಿರಿದು ಮಾಡಿರಣ್ಣ**
**ಆಹಾರವ ಕಿರಿದು ಮಾಡಿ**
**ಆಹಾರದಿಂ ವ್ಯಾಧಿ ಹಬ್ಬಿ ಬಲಿವುದಯ್ಯಾ**
**ಆಹಾರದಿಂದ ನಿದ್ರೆ, ನಿದ್ರೆಯಿಂ ತಾಮಸ, ಅಜ್ಞಾನ,**
**ಮೈಮರೆವು**
**ಅಜ್ಞಾನದಿಂ ಕಾಮವಿಕಾರ ಹೆಚ್ಚಿ ಕಾಯವಿಕಾರ,**
**ಮನೋವಿಕಾರ, ಭಾವವಿಕಾರ, ಇಂದ್ರಿಯವಿಕಾರ**
**ವಾಯುವಿಕಾರ ಇಂಥ ಪಂಚವಿಕಾರಗಳನ್ನುಂಟುಮಾಡಿ**
**ಸೃಷ್ಟಿಗೆ ತಹುದಾದ ಕಾರಣ ಕಾಯದ ಅತಿ ಪೋಷಣೆ ಬೇಡ**
**ಅತಿ ಪೋಷಣೆ ಮೃತ್ಯುವೆಂದುದು.**
**ಜಪತಪ ಧ್ಯಾನಧಾರಣ ಪೂಜೆಗೆ ಸೂಕ್ಷ್ಮದಿಂ ತನು**
**ಮಾತ್ರವಿದ್ದರೆ ಸಾಲದೆ?**
**ತನುವ ಪೋಷಿಸುವ**
**ಆಸೆ ಯತಿತ್ವಕ್ಕೆ ವಿಘ್ನವೆಂದುದು, ತನು ಪೋಷಣೆಯಿಂದ**
**ತಾಮಸ ಹೆಚ್ಚಿ ಅಜ್ಞಾನದಿಂ ವಿರಕ್ತಿ ಹಾನಿ**
**ಅರಿವು ನಷ್ಟ ಪರವು ದೂರ ನಿರಕ ನಿಲವಿಲ್ಲದ ಕಾರಣ**
**ಚೆನ್ನಮಲ್ಲಿಕಾರ್ಜುನನೊಲಿಸ ಬಂದ ಕಾಯವ ಕೆಡಿಸದೆ**
**ಉಳಿಸಿಕೊಳ್ಳಿರಯ್ಯಾ.**

ಈ ವಚನದಲ್ಲಿ ಅಕ್ಕನವರು ಆಹಾರ ಸೇವನೆಯ ಪ್ರಮಾಣವನ್ನು ಕಡಿಮೆ ಮಾಡಿ ಯಾವ ರೀತಿ ದೇಹ ವ್ಯಾಧಿಯ ಗೂಡಾಗುವುದನ್ನು ತಪ್ಪಿಸಿ, ಮೃತ್ಯುವನ್ನು ದೂರ ಮಾಡಬಹುದು ಎಂಬುದನ್ನು ತಿಳಿಸಿದ್ದಾರೆ. ದೇಹವನ್ನು ಸದೃಢವಾಗಿರಿಸಲು ಅತಿ ಆಹಾರ ಸಲ್ಲದು. ಆಹಾರ ಕಿರಿದು ಮಾಡುವುದರಿಂದ ದೇಹವನ್ನು ಆರೋಗ್ಯದಿಂದ ಇರಿಸಿಕೊಳ್ಳಬಹುದು. ಆಹಾರದ ಪ್ರಮಾಣವನ್ನು ಕಡಿಮೆ ಮಾಡುವುದರ ಬಗ್ಗೆ ಆಕೆ ಒತ್ತಿ ಒತ್ತಿ ಹೇಳಿದ್ದಾಳೆ. ಆಹಾರ ನೀಡುವ ಕೆಲೋರಿ ಮೌಲ್ಯ ಕಡಿಮೆಯಾದಷ್ಟು ಜೀವಿತ ಅವಧಿ ಹೆಚ್ಚುವುದನ್ನು ವಿಜ್ಞಾನ ಗುರುತಿಸಿ ಶತಮಾನ ಕೂಡಾ ಕಳೆದಿಲ್ಲ. ಅದನ್ನು ಎಂಟು ನೂರು ವರುಷಗಳ ಹಿಂದೆ ಅಕ್ಕ ಸಾರಿದ್ದು ಆಕೆಯ ವೈಜ್ಞಾನಿಕ ದೃಷ್ಟಿಕೋನಕ್ಕೆ ಸಾಕ್ಷಿ.



ಪ್ರಾತಃಸ್ಮರಣೀಯರು

# ವ್ಯಾಕರಣದ ಬಿ ಮಲ್ಲಪ್ಪನವರು

– ಎಚ್.ಎಸ್. ಸಿದ್ಧಗಂಗಪ್ಪ *

ಕನ್ನಡ ನಾಡು-ನುಡಿಯ ಬಗ್ಗೆ ಅಪಾರವಾದ ಪ್ರೀತಿ, ಗೌರವವನ್ನಿಟ್ಟುಕೊಂಡು ಅನೇಕ ಜನ ವಿದ್ವಾಂಸರು ಸೇವೆ ಸಲ್ಲಿಸಿ ಸ್ಮರಣೀಯರಾಗಿದ್ದಾರೆ. ೧೯ನೇ ಶತಮಾನದಲ್ಲಿ ಕೆಲವು ರಾಜಕೀಯ ಕಾರಣಗಳಿಂದ ಕನ್ನಡ ಭಾಷೆಯ ಮೇಲೆ ಗದಾಪ್ರಹಾರವಾಗುತ್ತಿತ್ತು. ಅಂತಹ ವಿಷಮ ಪರಿಸ್ಥಿತಿಯಲ್ಲಿ ಮೈಸೂರಿನ ಮಹಾರಾಜರಾಗಿದ್ದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ನಾಡು ನುಡಿಯ ಬಗ್ಗೆ ಅಪಾರವಾದ ಅಭಿಮಾನವುಳ್ಳವರಾಗಿದ್ದರಿಂದ ಕನ್ನಡ ಭಾಷೆ ಮತ್ತು ಸಾಹಿತ್ಯ ಉಳಿಯಲು ಸಾಧ್ಯವಾಯಿತು.

ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ ಉತ್ತರ ಕರ್ನಾಟಕದಲ್ಲಿ ಡೆಪ್ಯುಟಿ ಚೆನ್ನಬಸಪ್ಪನವರು, ಗಂಗಾಧರ ಮಡಿವಾಳೇಶ್ವರ, ಕಿತ್ತೂರು ಶಿವಲಿಂಗ ಪಂಡಿತ ಮೊದಲಾದ ಭಾಷಾಭಿಮಾನಿಗಳು ಕನ್ನಡ ನಾಡು ನುಡಿಯ ಏಳಿಗೆಗಾಗಿ ಅಪಾರವಾಗಿ ಶ್ರಮಿಸಿದರು. ಆ ಸಂದರ್ಭದಲ್ಲಿ ಕನ್ನಡದ ಮೇಲೆ ಮರಾಠಿ ಬಹಳವಾಗಿ ಸವಾರಿ ಮಾಡುತ್ತಿತ್ತು. ಮರಾಠಿ ಹಾವಳಿಯಿಂದ ಜನರಿಗೆ ಕನ್ನಡದ ನೆಲದ ಮೇಲಿದ್ದೇವೆ ಎಂಬುದನ್ನು ಮರೆಯುವಂತ ವಾತಾವರಣ ನಿರ್ಮಾನವಾಗಿತ್ತು. ಅಂತಹ ಸಂದರ್ಭದಲ್ಲಿ ಮೇಲೆ ಹೆಸರಿಸಿದ ಪುಣ್ಯಾತ್ಮರ ಅವಿರತ ಹೋರಾಟ, ಪ್ರಾಮಾಣಿಕ ಪ್ರಯತ್ನದಿಂದ ಕನ್ನಡ ಭಾಷೆಗೆ ಚೈತನ್ಯ ಬಂದಿತು.

ಇತ್ತ ಮೈಸೂರು ಭಾಗದಲ್ಲಿ ಅದೇ ಸಂದರ್ಭದಲ್ಲಿ ಹಲವು ಮಹನೀಯರು ಕನ್ನಡ ಭಾಷೆಯ ಅಭಿವೃದ್ಧಿಗಾಗಿ ತಮ್ಮನ್ನು ತೊಡಗಿಸಿಕೊಂಡರು. ಆಗ ಇವರ ಪ್ರಯತ್ನಕ್ಕೆ ಮಹಾರಾಜರಾದ ಶ್ರೀ ಮುಮ್ಮಡಿ ಕೃಷ್ಣರಾಜರ ಬೆಂಬಲವಿತ್ತು, ಪ್ರೋತ್ಸಾಹವಿತ್ತು. ರಾವ್‌ಬಹದ್ದೂರ್ ಅಂಬಿಗಲ್ ನರಸಿಂಹಯ್ಯಗಾರರು, ಬಾಬಾ ಸಾಹೇಬರು, ವ್ಯಾಕರಣದ ಮಲ್ಲಪ್ಪನವರು, ಬಸವಪ್ಪ ಶಾಸ್ತ್ರಿಗಳು, ಭಾಷಾರತ್ನ ಕರಿಬಸವ ಶಾಸ್ತ್ರಿಗಳು, ಚಿಟಿಗೆ ಸಿದ್ಧಲಿಂಗ ಶಾಸ್ತ್ರಿಗಳು, ವೇ. ಮಲ್ಲಾರಾಧ್ಯರು ಎಚ್.ವಿ. ನಂಜುಂಡಯ್ಯ ಮೊದಲಾದವರು ಪ್ರಮುಖರಾದವರು. ಇವರಲ್ಲಿ ವ್ಯಾಕರಣದ ಬಿ. ಮಲ್ಲಪ್ಪನವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಅನುಪಮವಾದುದು.

ಶರಣ ದಂಪತಿಗಳಾದ ಮಲ್ಲಿಕಾರ್ಜುನಪ್ಪ ಮತ್ತು ಮಲ್ಲಮ್ಮಾಜಿ ಅವರ ಪುತ್ರರಾಗಿ ಮಲ್ಲಪ್ಪನವರು ಮೈಸೂರು ಜಿಲ್ಲೆ ಗುಂಡ್ಲುಪೇಟೆ ತಾಲ್ಲೂಕಿಗೆ ಸೇರಿದ ಬೇಗೂರು ಗ್ರಾಮದಲ್ಲಿ ಜನಿಸಿದರು. ಹುಟ್ಟಿದ ವರ್ಷ ೧೮೩೩. ಇವರ ವಂಶಸ್ಥರು ಕೊಡಗಿನ ರಾಜಮನೆತನಕ್ಕೆ ಸೇರಿದವರೆಂದು, ಗುಂಡ್ಲುಪೇಟೆ ಪ್ರಾಂತದ ಪ್ರಸಿದ್ಧವಾದ ಅಂಗಳದ ಮಠಕ್ಕೆ ಶಿಷ್ಯರಾಗಿದ್ದರೆಂದು ತಿಳಿದು ಬರುತ್ತದೆ. ಈ ದಂಪತಿಗಳಿಗೆ ಬಹಳ ವರ್ಷಗಳ ಕಾಲ ಮಕ್ಕಳಾಗಲಿಲ್ಲ. ತಮ್ಮ ಆರಾಧ್ಯದೈವ ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಯ ಮೊರೆಹೋದ ಮೇಲೆ ಮಲ್ಲಪ್ಪ ಜನಿಸಿದರಂತೆ. ಮಲ್ಲಿಕಾರ್ಜುನನ ಆಶೀರ್ವಾದದಿಂದ ಜನಿಸಿದ ಈ ಮಗುವಿಗೆ ಪ್ರೀತಿಯಿಂದ ಇಟ್ಟ ಹೆಸರು ಮಲ್ಲಪ್ಪ ಎಂದು.

ಮಲ್ಲಪ್ಪನವರ ತಂದೆ ಅನಾರೋಗ್ಯದಿಂದ ಚಿಕ್ಕವಯಸ್ಸಿನಲ್ಲೇ ವಿಧಿವಶರಾದುದರಿಂದ ಮಲ್ಲಪ್ಪನಲ್ಲಿ ಅನಾಥ ಪ್ರಜ್ಞೆ ಕಾಡತೊಡಗಿತು. ಬಾಲ್ಯದಲ್ಲಿಯೇ ತೀಕ್ಷ್ಣಮತಿಯಾಗಿದ್ದ ಬಾಲಕ ಮಲ್ಲಪ್ಪನ ಭವಿಷ್ಯಕ್ಕೆ ಕುಂದಾಗಬಾರದೆಂದು ಆಗ ಮೈಸೂರು ಅರಮನೆಯಲ್ಲಿ ಮುಖ್ಯಾಧಿಕಾರಿಯಾಗಿದ್ದ ಅವರ ಸೋದರ ಮಾವ ಕೆಂಪಣ್ಣನವರ ಆಶ್ರಯಕ್ಕೆ ಸೇರಿದರು. ಭಕ್ಷಿ ಕೆಂಪಣ್ಣನವರು ಶ್ರೀ ಮುಮ್ಮಡಿ ಪ್ರಭುಗಳ ಪ್ರೀತಿ ಪಾತ್ರರಾಗಿದ್ದರು. ತಮ್ಮ ಸೋದರಳಿಯ ಮಲ್ಲಪ್ಪನನ್ನು ಪ್ರಭುಗಳ ಕೃಪೆಗೆ

---

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು
ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೩೩ ೬೩೮೭೧

ಪಾತ್ರರಾಗುವಂತೆ ಮಾಡಿದರು. ಮಹಾರಾಜರ ಕೃಪಾಶ್ರಯದಲ್ಲಿ ಮಲ್ಲಪ್ಪನವರ ಶಿಕ್ಷಣ ಪ್ರಾರಂಭ ವಾಯಿತು.

ಬಾಲಕ ಮಲ್ಲಪ್ಪ ತನಗೆ ದೊರೆತ ಅವಕಾಶವನ್ನು ಸದುಪಯೋಗಪಡಿಸಿಕೊಂಡರು. ಪ್ರತಿಭಾವಂತ ಸೂಕ್ಷ್ಮಮತಿಯಾಗಿದ್ದ ಮಲ್ಲಪ್ಪ ಬಾಲ್ಯದಲ್ಲಿಯೇ ಕನ್ನಡ ಸಂಸ್ಕೃತ, ಮರಾಠಿ, ಪರ್ಷಿಯನ್ ಮತ್ತು ಇಂಗ್ಲೀಷ್ ಭಾಷೆಯಲ್ಲಿ ಪ್ರಭುತ್ವವನ್ನು ಗಳಿಸಿದರು. ಸೋದರ ಮಾವ ಕೆಂಪಣ್ಣನವರು ಇವರ ವಿದ್ಯಾಭ್ಯಾಸದ ವಿಚಾರವಾಗಿ ಬಹಳ ನಿಗಾವಹಿಸುತ್ತಿದ್ದರು. ಇವರ ಶಿಕ್ಷಣಕ್ಕೆ ಆಗ ಅರಮನೆಯ ಕಂಟ್ರೋಲ್‌ರಾಗಿದ್ದ ಸಿ. ರಂಗಾ ಚಾರ್ಯರೂ ನೆರವಾದರು. ತಮ್ಮ ಅಪೂರ್ವ ಸಾಧನೆಯಿಂದ ಮಲ್ಲಪ್ಪನವರು ಘನವಿದ್ವಾಂಸರೆಂಬ ಹೆಗ್ಗಳಿಕೆಗೆ ಪಾತ್ರರಾದರು. ಆಗ ವೀರಶೈವ ಸಮಾಜದಲ್ಲಿ ಇವರೇ ಮೊಟ್ಟಮೊದಲ ಇಂಗ್ಲೀಷ್ ಕಲಿತುದರಿಂದ ಇವರನ್ನು 'ಇಂಗ್ಲೀಜಿ ಮಲ್ಲಪ್ಪ' ಎಂದು ಜನರು ಕರೆಯುತ್ತಿದ್ದರು. ಇವರು ವ್ಯಾಕರಣ ಶಾಸ್ತ್ರದಲ್ಲಿ ಅದ್ವಿತೀಯ ಪಾಂಡಿತ್ಯಗಳಿಸಿದ್ದರಿಂದ ಇವರನ್ನು ವ್ಯಾಕರಣ ಮಲ್ಲಪ್ಪ ಎಂದು ಗುರುತಿಸುತ್ತಿದ್ದರು. ಧಾರವಾಡದ ಕಡೆ ಡೆಪ್ಯುಟಿ ಚೆನ್ನಬಸಪ್ಪನವರಿದ್ದಂತೆ, ಮೈಸೂರು ಭಾಗದಲ್ಲಿ ಮಲ್ಲಪ್ಪ ನವರು ಕನ್ನಡ ಭಾಷೆಯ ಸಂರಕ್ಷಕರು ಎಂಬುದು ವಿದ್ವಾಂಸರ ಅಭಿಪ್ರಾಯ.

**ವೃತ್ತಿಜೀವನ** : ಅರಮನೆಯ ಕಂಟ್ರೋಲರ್ ಆಗಿದ್ದ ಸಿ. ರಂಗಾಚಾರ್ಯರ ಕೃಪೆಗೆ ಪಾತ್ರರಾಗಿ ಅರಮನೆಯಲ್ಲಿ ಭಾಷಾಂತರಕಾರರಾಗಿ ವೃತ್ತಿಜೀವನ ಪ್ರಾರಂಭಿಸಿದರು. ಆಗ ರಾಜಕೀಯದಲ್ಲಿ ಮರಾಠಿ ಮತ್ತು ಪರ್ಷಿಯನ್ ಭಾಷೆಗಳ ಪ್ರಾಬಲ್ಯವಿತ್ತು. ಐದು ಭಾಷೆಗಳಲ್ಲಿ ಪಾಂಡಿತ್ಯ ಗಳಿಸಿದ್ದರಿಂದ ಕೆಂಪಣ್ಣನವರ ಸಹಾಯದಿಂದ ಅರಮನೆ ಯಲ್ಲಿ ಪ್ರಸಿದ್ಧಿಯನ್ನು ಪಡೆದರು.

ಮಲ್ಲಪ್ಪನವರು ತಮ್ಮ ಸರಳತೆ, ಸಜ್ಜನಿಕೆ, ವಿದ್ಯಾವಿನಯ ಸಂಪತ್ತಿನಿಂದಲೂ ದಿವಾನ್ ರಂಗಾ ಚಾರ್ಯ, ಅಂಬಿಗಲ್ ನರಸಿಂಹಯ್ಯಂಗಾರ್ ಮೊದಲಾದ ಮಹನೀಯರ ಪ್ರೋತ್ಸಾಹದಿಂದಲೂ ವಿದ್ವತ್‌ಗಣಿ ಯಾಗಿದ್ದ ಮಹಾರಾಜರ ದಿವ್ಯಾನುಗ್ರಹಕ್ಕೆ ಪಾತ್ರರಾದರು. ಆ ಸಂದರ್ಭದಲ್ಲಿ ಮಹಾಪ್ರಭುಗಳು ನಮ್ಮ ರಾಜ್ಯದಲ್ಲಿ ಕನ್ನಡ-ಸಂಸ್ಕೃತ ಸಾಹಿತ್ಯಾಭಿವೃದ್ಧಿಗಾಗಿ ಹಲವು ಪ್ರಯತ್ನ ಗಳನ್ನು ಮಾಡಿದರು. ಸ್ವಯಂ ವಿದ್ವಾಂಸರಾಗಿದ್ದ ಮಹಾರಾಜರು 'ಭಾಷೋಜ್ಜೀವಿನೀ' ಎಂಬ ಒಂದು ಪಾಠಶಾಲೆಯನ್ನು ಮೈಸೂರಿನಲ್ಲಿ ಪ್ರಾರಂಭಿಸಿ, ಆ ಶಾಲೆಗೆ ತಮ್ಮ ಪ್ರೀತಿಗೆ ಪಾತ್ರರಾಗಿದ್ದ ಮಲ್ಲಪ್ಪನವರನ್ನೇ ಮುಖ್ಯೋಪಧ್ಯಾಯರಾಗಿ ನೇಮಿಸಿದರು. ಇವರು ತಮ್ಮ ಜೀವಮಾನವನ್ನೆಲ್ಲಾ ಆ ಪಾಠಶಾಲೆಯ ಮುಖ್ಯೋಪಾಧ್ಯ ಯರಾಗಿ ಸೇವೆ ಸಲ್ಲಿಸಿ ಆ ಹುದ್ದೆಗೆ ಘನತೆ ಗೌರವವನ್ನು ತಂದುಕೊಟ್ಟರು. ವೃತ್ತಿ ಅವರಿಗೆ ಜೀವನ ಮಾರ್ಗ ವಾಗಲಿಲ್ಲ. ಅವರ ಬದುಕಿಗೆ ನೆಮ್ಮದಿ, ಸಂತೋಷ, ತೃಪ್ತಿಯನ್ನು ತಂದುಕೊಡುವ ಕಾಯಕವಾಗಿತ್ತು.

**ಸಮಾಜಸೇವೆ** : ಬಿ. ಮಲ್ಲಪ್ಪನವರು ಶಿಕ್ಷಕ ವೃತ್ತಿಯ ಜೊತೆಗೆ ವೀರಶೈವ ಸಮಾಜಕ್ಕೆ ತಮ್ಮದೇ ಆದ ಅಮೂಲ್ಯ ಸೇವೆ ಸಲ್ಲಿಸಿದ್ದಾರೆ. ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರೀ, ಕರಿಬಸವ ಶಾಸ್ತ್ರೀ, ಎಂ. ಬಸವಲಿಂಗ ಶಾಸ್ತ್ರೀ ಮೊದಲಾದ ವಿದ್ವಾಂಸರ ಗ್ರಂಥ ರಚನೆ ಹಾಗೂ ಗ್ರಂಥ ಪ್ರಚಾರ ಕಾರ್ಯದಲ್ಲಿ ನೆರವಾಗುವುದರ ಜೊತೆಗೆ, ಯಜಮಾನ್ ವೀರಸಂಗಪ್ಪನವರು ಮಾಡುತ್ತಿದ್ದ ಸಮಾಜ ಸೇವಾ ಕಾರ್ಯಗಳಿಗೆ ಬಹಳವಾಗಿ ಸಹಾಯಕರಾಗಿದ್ದರೆಂದು ತಿಳಿದುಬರುತ್ತದೆ.

ವೀರಶೈವ ಸಮಾಜದಲ್ಲಿ ಹೆಚ್ಚು ಹೆಚ್ಚು ಜನ ವಿದ್ಯಾವಂತರಾಗಬೇಕೆಂಬ ಆಕಾಂಕ್ಷೆಯಿಂದ ಮಲ್ಲಪ್ಪನವರು ವೀರಶೈವ ಸಮಾಜದ ಉಳ್ಳವರ ಮೂಲಕ ವಿದ್ಯಾಭ್ಯಾಸಕ್ಕೆ ನೆರವು ನೀಡುವಂತೆ ಮಾಡಿದರೆಂದು ತಿಳಿದುಬರುತ್ತದೆ. ಅಲ್ಲದೆ ಮೈಸೂರಿನಲ್ಲಿರುವ ಚಿಕ್ಕಬಸಮ್ಮನವರ ವೀರಶೈವ ಅನಾಥಾಲಯ ನಿರ್ಮಾಣದಲ್ಲೂ, ಶ್ರೀ ಭಕ್ಷಿ ಮರಿಮಲ್ಲಪ್ಪನವರ ಪ್ರೌಢಶಾಲೆ ನಿರ್ಮಾಣ ಹಾಗೂ ಮೈಸೂರು ವೀರಶೈವ ಸಂಸ್ಕೃತ ಪಾಠಶಾಲೆ ಸ್ಥಾಪನೆ ಯಾಗುವಲ್ಲಿ ಮಲ್ಲಪ್ಪನವರು ಹೆಚ್ಚಿನ ಆಸಕ್ತಿ, ಶ್ರದ್ಧೆವಹಿಸಿದರೆಂದು ತಿಳಿದುಬರುತ್ತದೆ.

**ಕನ್ನಡ ಭಾಷಾ ಸೇವೆ** : ಮಲ್ಲಪ್ಪನವರು ತಮ್ಮ ಜೀವಿತಾವಧಿಯಲ್ಲಿ ಮೈಸೂರಿನಲ್ಲಿ ಯಾವ ಗ್ರಂಥ ಪ್ರಕಟವಾಗಬೇಕಾದರೂ, ಇವರು ಪರಿಶೀಲನೆ ಮಾಡಿ ಒಪ್ಪಿಗೆ ಸೂಚಿಸಿದ ನಂತರವೇ ಪ್ರಕಟವಾಗುತ್ತಿತ್ತು ಎಂದು ಹೇಳಲಾಗುತ್ತಿದೆ. ಮೈಸೂರಿನಲ್ಲಿ ಕನ್ನಡ ಭಾಷಾ ವಿಶಾರದರಾದ ವಿದ್ವಾಂಸರೆಷ್ಟೋ ಮಂದಿ ತಾವು ಬಿ. ಮಲ್ಲಪ್ಪನವರ ಶಿಷ್ಯರೆಂದು ಅಭಿಮಾನದಿಂದ



ಹೇಳಿಕೊಳ್ಳುತ್ತಾರೆ. ಇವರ ಕಾಲದಲ್ಲಿ ಮೈಸೂರು ಸರ್ಕಾರದ ವಿದ್ಯಾ ಖಾತೆಯಲ್ಲಿ ಮುಖ್ಯಾಧಿಕಾರಿಗಳಾಗಿದ್ದ ಬಾಬಾ ಅವರು ಮಲ್ಲಪ್ಪನವರ ವಿದ್ವತ್ತಿನ ಬಗ್ಗೆ ಅಭಿಮಾನವುಳ್ಳವರಾಗಿದ್ದರು. ಬಾಬಾರವರು ಕನ್ನಡ ಲೋಯರ್ ಸೆಕೆಂಡ್‌ರೀ ಪರೀಕ್ಷೆಗೆ ಹಾಗೂ ಪ್ರೌಢಶಾಲೆ ತರಗತಿಗಳಿಗೆ ಪಠ್ಯಪುಸ್ತಕವಾಗಿದ್ದ 'ಶಬ್ದಾದರ್ಶ' ಎಂಬ ಕನ್ನಡ ವ್ಯಾಕರಣ ಗ್ರಂಥವನ್ನು ಮಲ್ಲಪ್ಪನವರಿಂದಲೇ ಬರೆಸಿ ಸರ್ಕಾರದಿಂದಲೇ ಪ್ರಕಟ ಮಾಡಿದ್ದರು. ಈ ಗ್ರಂಥದ ಲಕ್ಷಾಂತರ ಪ್ರತಿಗಳು ಮುದ್ರಣವಾಗಿ ಮಾರಾಟವಾಗಿತ್ತು. ಸಂಸ್ಕೃತ ವಿದ್ಯಾರ್ಥಿಗಳಿಗೆ ಡಾ. ಭಂಡಾರ್‌ಕರ್ ಇದ್ದಂತೆ ಕನ್ನಡ ವಿದ್ಯಾರ್ಥಿಗಳಿಗೆ ಮಲ್ಲಪ್ಪನವರು ವ್ಯಾಕರಣದ ಗುರುವಾಗಿದ್ದಾರೆ.

ಮಲ್ಲಪ್ಪನವರು ಕನ್ನಡ ಸಾಹಿತ್ಯದಲ್ಲಿ ಮುಕುಟ ಪ್ರಾಯವಾಗಿರುವ ನಾಗವರ್ಮನ ಕಾದಂಬರಿ ಚಂಪೂ ಗ್ರಂಥವನ್ನು ಚೆನ್ನಾಗಿ ಪರಿಶೋಧಿಸಿ ಕಠಿಣವಾದ ಶಬ್ದಗಳಿಗೆ ಅರ್ಥವನ್ನು ಬರೆದು ಇಂಗ್ಲೀಷ್ ಮತ್ತು ಕನ್ನಡ ಭಾಷೆಗಳಲ್ಲಿ ವಿದ್ವತ್ಪೂರ್ಣವಾದ ಪ್ರಸ್ತಾವನೆಯನ್ನು ಬರೆದು ಕ್ರಿ.ಶ. ೧೮೯೬ನೇ ವರ್ಷದಲ್ಲಿ ಪ್ರಕಟಿಸಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಮಹದುಪಕಾರ ಮಾಡಿದ್ದಾರೆ. ಆದರೆ ಈಗ ಈ ಗ್ರಂಥ ಸಿಗುವುದು ದುರ್ಲಭವಾಗಿದೆ. ೧೯೩೩ ರಲ್ಲಿ ಪ್ರೊ. ಟಿ.ಎಸ್.ವೆಂಕಣ್ಣಯ್ಯನವರು 'ಕರ್ನಾಟಕ ಕಾದಂಬರೀ ಸಂಗ್ರಹ' ಎಂಬ ಹೆಸರಿನಿಂದ ಈ ಗ್ರಂಥವನ್ನೇ ಸಂಗ್ರಹಿಸಿ ಪ್ರಕಟಿಸಿದ್ದಾರೆ.

ಮಹಾಕವಿ ನಾಗವರ್ಮನ ಕಾವ್ಯಾವಲೋಕನ ದಲ್ಲಿರುವ ಅರ್ಥಲಂಕಾರ ಅಧ್ಯಾಯವನ್ನೇ ಬೇರೆಯಾಗಿ ಮುದ್ರಿಸಿ ಕೊಟ್ಟಿದ್ದಾರೆ. ಇದು ಇವರ ಪ್ರಥಮ ಗ್ರಂಥವೆಂದು ತಿಳಿದುಬಂದಿದೆ. ಈ ಗ್ರಂಥವನ್ನು ಮೈಸೂರು ಪ್ರಾಚೀನ ಪುಸ್ತಕಾಲಯದವರು ಸಂಪೂರ್ಣವಾಗಿ ಪ್ರಕಟಿಸಿದ್ದಾರೆ. ಮಲ್ಲಪ್ಪನವರು ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರೀಗಳಿಂದ ಕನ್ನಡಕ್ಕೆ ಭಾಷಾಂತರಿಸಲ್ಪಟ್ಟ 'ಕರ್ನಾಟಕ ಶಾಕುಂತಲ ನಾಟಕ'ದ ಮೊದಲನೇ ಮುದ್ರಣವನ್ನು ಮಾಡಿಸಿಕೊಟ್ಟಿದ್ದರು. ಈ ನಾಟಕದ ಭಾಷಾಂತರವು ಮೌಲಿಕವಾದುದಕ್ಕೆ ಕೆಲಮಟ್ಟಿಗೆ ಮಲ್ಲಪ್ಪನವರ ಕೊಡಗೆಯಿದೆ ಎಂದು ಅವರ ಸಮಕಾಲೀನ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ರೆವರೆಂಡ್ ಕಿಟ್ಟೆಲ್‌ರವರಿಗೂ, ಲೂಯಿಸ್ ರೈಸ್‌ರವರಿಗೂ ಸಾಹಿತ್ಯ ಸೇವಾ ಕಾರ್ಯದಲ್ಲಿ ಬಿ.ಮಲ್ಲಪ್ಪನವರು ಸಹಾಯಕರಾಗಿದ್ದರಂತೆ ತಿಳಿದು ಬರುತ್ತದೆ.

ಮಲ್ಲಪ್ಪನವರ ಸಹವರ್ತಿಗಳು ಹೇಳಿರುವಂತೆ ಮಲ್ಲಪ್ಪನವರು ವಿನಯಶೀಲರೂ, ಸಾಹಿತ್ಯ ಪ್ರವೃತ್ತಿ ಯುಳ್ಳವರೂ, ಪೂಜಾನಿಷ್ಠರೂ, ವಿದ್ಯಾಭಿಮಾನಿಗಳೂ, ಖಂಡಿತವಾದಿಗಳೂ, ಪರೋಪಕಾರ ನಿರತರೂ, ಉಜ್ವಲ ಕನ್ನಡ ಪ್ರೇಮಿಗಳೂ, ಸ್ನೇಹಪರರೂ ಆಗಿದ್ದರಂತೆ. ಇಂಥ ಅಪೂರ್ವ ವ್ಯಕ್ತಿತ್ವವುಳ್ಳವರಾಗಿದ್ದರಿಂದ ಆಗಿನ ಕಾಲದಲ್ಲಿ ಗಣ್ಯರೆನಿಸಿದ್ದ ದಿವಾನ್ ರಂಗಾಚಾರ್ಲು, ಅಂಬಿಗರ ನರಸಿಂಹಯ್ಯಗಾರ್, ದಿವಾನ್ ಸರ್.ಛಾರ್ಲಸ್ ಇಲಿಯಟ್ ಮೊದಲಾದವರ ಪ್ರೀತಿ, ಗೌರವಕ್ಕೆ ಪಾತ್ರರಾಗಿದ್ದರು.

ಇವರ ವ್ಯಕ್ತಿತ್ವಕ್ಕೆ ಮಾರುಹೋದ ರಾವ್‌ಬಹದ್ದೂರ್ ಎಚ್, ಕೃಷ್ಣಶಾಸ್ತ್ರಿಗಳು, ಎಂ. ವೆಂಕಟಕೃಷ್ಣ ಮೊದಲಾದ ವಿದ್ವಾಂಸರು, ಬಸವಪ್ಪ ಶಾಸ್ತ್ರೀ, ಪಂಡಿತ ಕರಿಬಸವ ಶಾಸ್ತ್ರೀ, ಮಲ್ಲಾರಾಧ್ಯ, ಚಿಟಗಿ ಸಿದ್ಧಲಿಂಗ ಶಾಸ್ತ್ರೀ ಮೊದಲಾದ ವಿದ್ವಾಂಸರು ತಮ್ಮ ಗುರುಗಳಾದ ಮಲ್ಲಪ್ಪನವರ ಗುಣಗಾನ ಮಾಡಿದ್ದಾರೆ.

ಬಿ.ಮಲ್ಲಪ್ಪನವರ ಪ್ರತಿಭಾ ಶ್ರೀಮಂತಿಕೆಗೆ ಒಂದು ಉಜ್ವಲ ನಿದರ್ಶನವೆಂದರೆ, ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಬ್ರಿಟಿಷರ ಸಹಕಾರದಿಂದ ರಾಜ್ಯವು ಹಿಂತಿರುಗಿದ ಮೇಲೆ, ಆಗಿನ ಮೈಸೂರಿನ ಸ್ಥಿತಿಗತಿ ಗಳನ್ನು ಸುಧಾರಿಸಲಿಕ್ಕೆ ಬ್ರಿಟಿಷ್ ಪಾರ್ಲಿಮೆಂಟ್‌ನಿಂದ ನಿಯಮಾನುಸಾರವಾಗಿ ಮೈಸೂರಿಗೆ ಬಂದ ಸರ್ ಛಾರ್ಲಸ್ ಇಲಿಯಟ್ ಸಾಹೇಬರು ಒಂದು ಸಮಿತಿ ಯನ್ನು ರಚಿಸಿ ಅದಕ್ಕೆ ಪಿ.ರಂಗಾಚಾರ್ಯರನ್ನು ಕಾರ್ಯದರ್ಶಿಯನ್ನಾಗಿ ನೇಮಿಸಿ ಮೈಸೂರಿನ ವಿದ್ಯಮಾನಗಳನ್ನು ಜನರಿಂದ ತಿಳಿಯುತ್ತಿದ್ದಾಗ ೧೪ ವರ್ಷದ ಬಾಲಕ ಬಿ.ಮಲ್ಲಪ್ಪನವರು ಇಂಗ್ಲೀಷ್ ಮತ್ತು ಪರ್ಷಿಯನ್ ಭಾಷೆಗಳಲ್ಲಿ ಕನ್ನಡಿಗರ ಸಾಕ್ಷಿಗಳ ಮಾತುಗಳನ್ನು ಭಾಷಾಂತರಿಸಿ ಇಲಿಯಟ್ ಸಾಹೇಬರಿಗೆ ಹೇಳುತ್ತಿದ್ದರಂತೆ. ಸಿ.ರಂಗಾಚಾರ್ಯರು ಕೇವಲ ಇಂಗ್ಲೀಷ್ ಭಾಷೆ ಬಲ್ಲವರಾಗಿ ಪರ್ಷಿಯನ್ ಭಾಷೆ ಬಾರದೆ ಇದ್ದುದರಿಂದ ಇಲಿಯಟ್ಟನು ಇಂಗ್ಲೀಷ್ ಮತ್ತು ಪರ್ಷಿಯನ್ ಭಾಷೆಗಳಲ್ಲಿ ಪ್ರವೀಣನಾಗಿದ್ದುದರಿಂದಲೂ, ಮಲ್ಲಪ್ಪನವರಿಗೆ ಇಂಗ್ಲೀಷ್ ಮತ್ತು ಪರ್ಷಿಯನ್





ಭಾಷೆಗಳಲ್ಲಿ ಆ ವಯಸ್ಸಿನಲ್ಲಿ ಆ ಭಾಷೆಗಳ ಮೇಲೆ ಪಾಂಡಿತ್ಯವಿದ್ದುದರಿಂದ ಪರ್ಶಿಯನ್ ಭಾಷೆಯ ಕಾಗದ ಪತ್ರಗಳನ್ನು ಓದಿ ಹೇಳುವುದಕ್ಕೆ ಇವರ ಸಹಾಯ ಇಲಿಯಟ್ ಸಮಿತಿಗೆ ಅನಿವಾರ್ಯವಾಯಿತಂತೆ. ಈ ಚಿಕ್ಕಹುಡುಗನ ಪ್ರತಿಭೆ, ಜಾಣ್ಮೆಯನ್ನು ಮೆಚ್ಚಿ ವಿವೇಕಿಯಾದ ಇಲಿಯಟ್‌ನು ಮಲ್ಲಪ್ಪನವರ ಬಗ್ಗೆ ತನ್ನ ಮೆಚ್ಚುಗೆಯನ್ನು ಹೀಗೆ ಅಭಿವ್ಯಕ್ತಪಡಿಸಿದ್ದಾನೆ.

I am struck with the extraordinary intellegence of beaming countanance of this young lad of 14 years. I am sure that in years to come he will turn out to be a great Mysorean, provided that his future concataon is supervised in careful ways. I therefore endow it as the official duty on The Controller to the palace Mysore to supervise the periodical Educational Progress of the boy and to second the same before disabuing the stipend to the stipend to the stipendiary."

ಛಾರ್ಲೆಸ್ ಇಲಿಯಟ್‌ನ ಈ ಮಾತುಗಳು ಬಿ.ಮಲ್ಲಪ್ಪನವರ ವಿದ್ವತ್ ವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿದೆ. ಬಹುಭಾಷಾ ಪಂಡಿತರು, ವೀರಶೈವ ಸಮಾಜದ ಹಿತಚಿಂತಕರೂ, ವ್ಯಾಕರಣದ ಬಿ. ಮಲ್ಲಪ್ಪನವರು ಫೆಬ್ರವರಿ ೧೪, ೧೯೦೭ ರಂದು ವಿಧಿವಶರಾದರು. ಅವರಿಗೆ ೭೨ ವರ್ಷವಾಗಿತ್ತು. ಇವರ ಸಮಾಧಿ ಮೈಸೂರಿನಲ್ಲಿದ್ದು, ಸಮಾಧಿಯ ಮೇಲೆ ಮಂಟಪವನ್ನು ಕಟ್ಟಿದ್ದಾರೆ. ಬೆಂಗಳೂರಿನ ಪರಿಷನ್ಮಂದಿರದಲ್ಲಿ ಈ ಮಹನೀಯರ ಭಾವಚಿತ್ರವನ್ನು ಅಳವಡಿಸಿ ಗೌರವ ಸಲ್ಲಿಸಲಾಗಿದೆ. ■



ಆಗಸ್ಟ್ ೬ ರಂದು, ತುಮಕೂರು ಜಿಲ್ಲಾ ವೀರಶೈವ ಲಿಂಗಾಯತ ಸೇವಾ ಸಮಿತಿ ಏರ್ಪಡಿಸಿದ್ದ ೨೦೨೨-೨೩ನೇ ಸಾಲಿನ ಎಸ್.ಎಸ್.ಎಲ್.ಸಿ. ಹಾಗೂ ದ್ವಿತೀಯ ಪಿಯುಸಿ ಪರೀಕ್ಷೆಯಲ್ಲಿ ಅತಿಹೆಚ್ಚು ಅಂಕಗಳನ್ನು ಪಡೆದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ಹಾಗೂ ನೂತನವಾಗಿ ಆಯ್ಕೆಯಾಗಿರುವ ತುಮಕೂರು ನಗರದ ಶಾಸಕರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್ ಹಾಗೂ ತಿಪಟೂರಿನ ಶಾಸಕರಾದ ಶ್ರೀ ಷಡಕ್ಷರಿ ಅವರಿಗೆ ಅಭಿನಂದನಾ ಸಮಾರಂಭವು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು.





ವರದಿ :

# ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ

## ಹೃದ್ರೋಗ ವಿಭಾಗಕ್ಕೆ ನೂತನ ಒಸಿಟಿ ಟೆಕ್ನಾಲಜಿ ಸೇರ್ಪಡೆ

ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮೀಜಿಯವರ ಮಾರ್ಗದರ್ಶನದಲ್ಲಿ ಆರಂಭವಾಗಿರುವ ಸಿದ್ಧಗಂಗಾ ಆಸ್ಪತ್ರೆ ರೋಗಿಗಳಿಗಾಗಿ ಸದಾ ವಿಶ್ವದರ್ಜೆಯ ತಂತ್ರಜ್ಞಾನ ಒದಗಿಸುತ್ತಲೇ ಬಂದಿದೆ. ಇದೀಗ ನಮ್ಮ ಆಸ್ಪತ್ರೆಯ ಹೃದ್ರೋಗ ವಿಭಾಗಕ್ಕೆ ನೂತನ ಒಸಿಟಿ ತಂತ್ರಜ್ಞಾನ ಅಳವಡಿಕೆಗೆ ಚಾಲನೆ ನೀಡಲಾಯಿತು. ಖ್ಯಾತ ಹೃದ್ರೋಗ ತಜ್ಞರಾದ ಡಾ.ಪ್ರಭಾಕರ್ ಕೋರೆಗಲ್ ನೂತನ ತಂತ್ರಜ್ಞಾನಕ್ಕೆ ಚಾಲನೆ ನೀಡಿದರು. ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಸೂಪರ್ ಸ್ಪೆಷಾಲಿಟಿ ವಿಭಾಗದ ಮುಖ್ಯಸ್ಥ ಹಾಗೂ ಹೃದ್ರೋಗ ತಜ್ಞರಾದ ಡಾ.ಭಾನುಪ್ರಕಾಶ್, ಡಾ.ಶರತ್, ಡಾ.ನೀಲೇಶ್, ಡಾ.ಸುರೇಶ್ ಶಸ್ತ್ರಚಿಕಿತ್ಸೆಯ ನೇರಪ್ರಸಾರ ಹಾಗೂ ಸಂವಾದ ನಡೆಸಿಕೊಟ್ಟರು.

ತುಮಕೂರು ಜಿಲ್ಲೆಯ ವೈದ್ಯರುಗಳ ತಂಡ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಹೃದ್ರೋಗಿಗಳಿಗೆ ಈ ಟೆಕ್ನಾಲಜಿ ಬಳಕೆಯಿಂದ ನಿಖರ, ಪರಿಣಾಮಕಾರಿ ಶಸ್ತ್ರಚಿಕಿತ್ಸೆ ನೀಡಬಹುದಾಗಿದ್ದು, ರಾಜ್ಯದ ಕೆಲವೇ ಕೆಲವು ಆಸ್ಪತ್ರೆಗಳಲ್ಲಿ ಕಂಡು ಬರುವ ಈ ತಂತ್ರಜ್ಞಾನ ಬಳಕೆ ಆಸ್ಪತ್ರೆಯ ಹೊಸ ಮೈಲಿಗಲ್ಲು.

ಸೂಪರ್ ಸ್ಪೆಷಾಲಿಟಿ ಮುಖ್ಯಸ್ಥ ಹಾಗೂ ಹಿರಿಯ ಹೃದ್ರೋಗ ತಜ್ಞ ಡಾ.ಹೆಚ್.ಎಂ. ಭಾನುಪ್ರಕಾಶ್, ನೇತೃತ್ವದ ಡಾ.ಶರತ್, ಡಾ.ಸುರೇಶ್, ಡಾ.ನಿಲೇಶ್ ಒಳಗೊಂಡ ತಂಡ, ಹೃದಯಾಘಾತಕ್ಕೆ ಒಳಗಾಗಿ ತುರ್ತುಚಿಕಿತ್ಸೆ ಅವಶ್ಯಕತೆಯಿದ್ದ ೬೫ ವರ್ಷದ ಪುರುಷ ಹಾಗೂ ೭೫ ವರ್ಷದ ಮಹಿಳಾ ಹೃದ್ರೋಗಿಗಳಿಗೆ ಒಸಿಟಿ ತಂತ್ರಜ್ಞಾನ ಬಳಸಿಕೊಂಡು ಯಶಸ್ವಿ ಶಸ್ತ್ರಚಿಕಿತ್ಸೆ ನಡೆಸಿದರು. ತುಮಕೂರು ಜಿಲ್ಲೆಯ ೧೦೦ ಕ್ಕೂ ಹೆಚ್ಚು ವೈದ್ಯರು ಶಸ್ತ್ರಚಿಕಿತ್ಸೆಯ ನೇರಪ್ರಸಾರ ಹಾಗೂ ಸಂವಾದ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಚರ್ಚೆ ನಡೆಸಿದರು. ಯಾವುದೇ ಅಡ್ಡಪರಿಣಾಮಗಳನ್ನು ಎದುರಿಸದೆ,ಸ್ಪಷ್ಟ ನಿರ್ದೇಶನಗಳ ಮೂಲಕ ನಡೆದ ಒಸಿಟಿ ಶಸ್ತ್ರಚಿಕಿತ್ಸೆಗೆ ವೈದ್ಯರುಗಳಿಂದ ಪ್ರಶಂಸೆ ವ್ಯಕ್ತವಾಯಿತು.

## ಏನಿದು ಓಸಿಟಿ ತಂತ್ರಜ್ಞಾನ!

ಒಸಿಟಿ ಅಂದ್ರೆ ಆಪ್ಟಿಕಲ್ ಕೋಹೆರನ್ಸ್ ಟೆಮೋಗ್ರಫಿಯೂ, ಸಾಮಾನ್ಯವಾಗಿ ನಾವು ಹೃದ್ರೋಗಿಗಳಿಗೆ ಕ್ಯಾಥಲ್ಯಾಬ್‌ಗಳಲ್ಲಿ ಆಂಜಿಯೋಗ್ರಾಂ, ಆಂಜಿಯೋಪ್ಲಾಸ್ಟಿ, ಸ್ಟಂಟ್ ಅಳವಡಿಸುವುದು ಸೇರಿದಂತೆ ಅನೇಕ ಚಿಕಿತ್ಸೆಗಳನ್ನು ನೀಡುತ್ತೇವೆ. ಈ ಸಮಯದಲ್ಲಿ ಲಭ್ಯವಿರುವ ಎಲ್ಲಾ ತಂತ್ರಜ್ಞಾನ ಬಳಸಿಯೂ ಕೂಡ ಚಿಕಿತ್ಸೆಯಲ್ಲಿ ಸಣ್ಣಪುಟ್ಟ ತೊಡಕುಗಳಿಂದ ವೈದ್ಯರು ಪ್ರಯಾಸಪಡುತ್ತಲೇ ಇರುತ್ತಾರೆ. ತಪ್ಪುಗ್ರಹಿಕೆ, ತಪ್ಪು ನಿರ್ಣಯ ಕೆಲವೊಮ್ಮೆ ರೋಗಿಯ ಜೀವಕ್ಕೂ ಅಪಾಯ ತರುವಂತಹದ್ದಾಗಿರುತ್ತದೆ. ಹಾಗಾಗಿ ಈ ಒಸಿಟಿ ಟೆಕ್ನಾಲಜಿ ಬಳಕೆಯಿಂದ ಈ ಎಲ್ಲಾ ತಪ್ಪುಗಳಿಗೆ ಒಂದು ಪೂರ್ಣವಿರಾಮ ನೀಡಬಹುದಾಗಿದೆ.

ಅತಿಗೆಂಪು ಬೆಳಕನ್ನು ಅಂದ್ರೆ ಇನ್ಫಾರೆಡ್ ಲೈಟ್ ಬಳಸಿಕೊಳ್ಳುವ ಮೂಲಕ ಒಸಿಟಿ ಹೃದಯದ ಅಂಗಾಂಗಗಳ ಹೆಚ್ಚಿನ ರೆಸಿಲ್ಯೂಷನ್ ಹಾಗೂ ಕ್ರಾಸ್‌ಸೆಕ್ಷನ್ ಇಮೇಜ್‌ಗಳನ್ನು ನೋಡುತ್ತೇವೆ. ಇದರಿಂದ ಹೃದಯಕ್ಕೆ ಸಂಬಂಧಿಸಿದ ಆಪರೇಷನ್‌ಗಳಲ್ಲಿ (ಇಂಟ್ರಾವಾಸ್ಕುಲರ್) ವೈದ್ಯರು ಸಮಸ್ಯೆಯನ್ನು ಸುಲಭವಾಗಿ ಹಾಗು ನಿಖರವಾಗಿ




ನಿರ್ಣಯಿಸಬಹುದಾಗಿದೆ. ಫ್ಲೇಕ್‌ಗಳನ್ನು ಸಂಯೋಜಿಸುವುದು, ಸ್ಟಂಟ್ ಅಳವಡಿಸುವ ಸಂದರ್ಭದಲ್ಲಿ ಹೃದಯದ ನಾಳಗಳ ಸಂಪೂರ್ಣ ವಿವರಗಳನ್ನು ಇದು ನೀಡುವುದರಿಂದ ಇದರ ಬಳಕೆ ಯಾವುದೇ ಆಪರೇಷನ್ ಯಶಸ್ವಿಯಾಗಲು ಬಹಳಷ್ಟು ಅನುಕೂಲ ಒದಗಿಸುತ್ತದೆ.

ವೇಗ ಹಾಗೂ ಶೀಘ್ರವಾಗಿ ಚಿಕಿತ್ಸೆ ನೀಡಲು ಸಹಾಯಕವಾಗುವುದರಿಂದ ಇದು ರೋಗಿಗಳ ಅಸ್ವಸ್ಥತೆ ಉಂಟಾಗುವುದನ್ನು ತಡೆಗಟ್ಟುವುದಷ್ಟೇ ಅಲ್ಲ, ಹೃದಯದ ತುರ್ತು ಚಿಕಿತ್ಸೆಗಳಲ್ಲಿ ಬಹಳಷ್ಟು ಸಮಯವನ್ನೂ ಕೂಡ ಉಳಿಸಿ ರೋಗಿಗಳ ಜೀವ ಕಾಪಾಡುವಲ್ಲಿ ನಿರ್ಣಾಯಕ ಪಾತ್ರವಹಿಸುತ್ತದೆ.

* * *

## ಗುರುವಿನ ಮಾರ್ಗದರ್ಶನ ಅವಶ್ಯಕ: ಡಾ.ಎಸ್.ಪರಮೇಶ್

ಸಿದ್ಧಗಂಗಾ ಆಸ್ಪತ್ರೆಯಲ್ಲಿ ನಡೆದ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮೀಜಿಯವರ ಜನ್ಮವರ್ಧಂತಿ ಕಾರ್ಯಕ್ರಮ ನಡೆಯಿತು. ಸಿದ್ಧಗಂಗಾ ಆಸ್ಪತ್ರೆಯ ರೋಗಿಗಳಿಗೆ ಹಣ್ಣುಹಂಪಲು ವಿತರಣೆ ಮಾಡಿ ಮಾತನಾಡಿದ ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್ "ಸಾಧನೆಗೆ ಗುರುವಿನ ಮಾರ್ಗದರ್ಶನವಿದ್ದರೆ, ಜಗತ್ತಿನಲ್ಲಿ ಸಾಧನೆ ಅಸಾಧ್ಯವಲ್ಲ. ಶ್ರದ್ಧೆ ಹಾಗೂ ಭಕ್ತಿಯ ಮಾರ್ಗದಲ್ಲಿ ಗುರುವಿನ ಸೇವೆ ಮಾಡಿದವನು ಜೀವನದಲ್ಲಿ ಮುಕ್ತಿ ಸಾಧಿಸುತ್ತಾನೆ. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರ ಸರಳತೆ, ಧಾರ್ಮಿಕ ಶಕ್ತಿ ಲಿಂಗೈಕ್ಯ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ಪ್ರತಿರೂಪವಾಗಿರುವ ಅವರ ತ್ರಿವಿಧ ದಾಸೋಹ ಹಾಗೂ ಚಿಂತನೆಗಳು ನಮಗೆ ದಾರಿ ದೀಪವಾಗಿವೆ" ಎಂದರು.

ಸಿದ್ಧಗಂಗಾ ಮೆಡಿಕಲ್ ಕಾಲೇಜು ಪ್ರಾಚಾರ್ಯರಾದ ಡಾ.ಎಂ.ಶಾಲಿನಿರವರು ಮಾತನಾಡಿ "ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರ ಆಶಯದಂತೆ, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರ ದೂರದೃಷ್ಟಿಯ ಫಲವಾಗಿ ಆರೋಗ್ಯ ದಾಸೋಹವನ್ನು ಧ್ಯೇಯವಾಗಿಟ್ಟುಕೊಂಡು ಆರಂಭವಾಗಿರುವ ಸಿದ್ಧಗಂಗಾ ಮೆಡಿಕಲ್ ಕಾಲೇಜು ಸುತ್ತಮುತ್ತಲಿನ ಲಕ್ಷಾಂತರ ಗ್ರಾಮೀಣ ಹಾಗೂ ನಗರ ಪ್ರದೇಶದ ಜನತೆಗೆ ಉಚಿತ ಆರೋಗ್ಯ ನೀಡುವ ಮೂಲಕ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುತ್ತಿದೆ. ರೋಗಿಗಳ ಬಗ್ಗೆ ಅವರಿಗಿರುವ ವಾತ್ಸಲ್ಯವೇ ನಮ್ಮ ಆಸ್ಪತ್ರೆಯಲ್ಲಿ ಗುಣಮುಖರಾಗುವ ರೋಗಿಗಳ ಸಂಖ್ಯೆಯನ್ನು ಹೆಚ್ಚಿಸುತ್ತಿದೆ" ಎಂದರು.





ಸಿದ್ಧಗಂಗಾ ಸೂಪರ್ ಸ್ಪೆಷಾಲಿಟಿ ವಿಭಾಗದ ಮುಖ್ಯಸ್ಥರಾದ ಡಾ.ಹೆಚ್.ಎಂ.ಭಾನುಪ್ರಕಾಶ್ ಮಾತನಾಡಿ "ಪೂಜ್ಯರು ಸದಾ ರೋಗಿಗಳ ಬಗ್ಗೆ ಇಟ್ಟಿರುವ ಕಾಳಜಿ ನಮ್ಮನ್ನು ಹೆಚ್ಚು ಕರ್ತವ್ಯ ನಿರ್ವಹಿಸುವಂತೆ ಪ್ರೇರೇಪಿಸುತ್ತದೆ. ಅತ್ಯಾಧುನಿಕ ಚಿಕಿತ್ಸೆಯನ್ನು ನೀಡಿ ಬಡವರ ಆರೋಗ್ಯ ಸುಧಾರಿಸುವ ಅವರ ಸ್ಪಷ್ಟ ಸಂದೇಶವೇ ನಮ್ಮ ಗುರಿಯಾಗಿದೆ" ಎಂದರು.

ಈ ಸಂದರ್ಭದಲ್ಲಿ ಮೆಡಿಕಲ್ ಕಾಲೇಜು ಮೇಲ್ವಿಚಾರಕ ಡಾ.ನಿರಂಜನಮೂರ್ತಿ, ಸಿಇಓ ಡಾ.ಸಂಜೀವ್ ಕುಮಾರ್ ಸೇರಿದಂತೆ ವೈದ್ಯಕೀಯ ಕಾಲೇಜು ಹಾಗೂ ಸೂಪರ್ ಸ್ಪೆಷಾಲಿಟಿ ವಿಭಾಗದ ವೈದ್ಯರು ಹಾಗೂ ಸಿಬ್ಬಂದಿ ಉಪಸ್ಥಿತರಿದ್ದರು.

* * *



ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಹಾಗೂ ಸಂಶೋಧನಾ ಸಂಸ್ಥೆ ವತಿಯಿಂದ 'ಎಥಿಕ್ಸ್ ಡೇ' ಆಚರಿಸಲಾಯಿತು.

ವೈದ್ಯರು, ಉಪನ್ಯಾಸಕರೂ ಸೇರಿದಂತೆ ಎಲ್ಲಾ ವಿದ್ಯಾರ್ಥಿ ಹಾಗೂ ಸಿಬ್ಬಂದಿಗಳು ಭಾರತೀಯ ಸಂಸ್ಕೃತಿ ಬಿಂಬಿಸುವ ಉಡುಪುಗಳನ್ನು ಧರಿಸಿ ಸಾಂಸ್ಕೃತಿಕ ರಾಯಭಾರಿಗಳಂತೆ ಕಂಗೊಳಿಸಿದರು. ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕ ಡಾ.ಎಸ್.ಪರಮೇಶ್, ಮೆಡಿಕಲ್ ಕಾಲೇಜು ಪ್ರಾಚಾರ್ಯರಾದ ಡಾ.ಶಾಲಿನಿ ಸೇರಿದಂತೆ ವೈದ್ಯರು ಹಾಗೂ ಸಿಬ್ಬಂದಿ ಉಪಸ್ಥಿತರಿದ್ದರು.

* * *

## ಉಚಿತ ಕ್ಯಾಟರಾಕ್ಟ್ ಸರ್ಜರಿ ಕಾರ್ಯಕ್ರಮ

ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರ ಜನ್ಮವರ್ಧಂತಿ, ಜಿಲ್ಲಾ ಅಂಧತ್ವ ನಿಯಂತ್ರಣಾ ಕಾರ್ಯಕ್ರಮದ ಅಂಗವಾಗಿ ಉಚಿತ ಕ್ಯಾಟರಾಕ್ಟ್ ಶಸ್ತ್ರಚಿಕಿತ್ಸಾ ಕಾರ್ಯಕ್ರಮ ನಡೆಯಿತು.







ಇದೇ ವೇಳೆ ಮಾತನಾಡಿದ ಮೆಡಿಕಲ್ ಕಾಲೇಜಿನ ಪ್ರಾಚಾರ್ಯರಾದ ಡಾ.ಎಂ.ಶಾಲಿನಿರವರು "ಕಣ್ಣಿನ ಆರೈಕೆಯಲ್ಲಿ ನಾವು ವಹಿಸುವ ನಿರ್ಲಕ್ಷ್ಯವೇ ಭವಿಷ್ಯದಲ್ಲಿ ಕಣ್ಣಿನ ಸಮಸ್ಯೆಗಳಿಗೆ ಕಾರಣವಾಗಿ ಭವಿಷ್ಯವನ್ನು ಕತ್ತಲಾಗಿಸುತ್ತವೆ" ಎಂದು ತಿಳಿಸಿದರು. ಪ್ಯಾರಾಮೆಡಿಕಲ್ ಕಾಲೇಜಿನ ಉಪಪ್ರಾಂಶುಪಾಲರು ಹಾಗೂ ನೇತ್ರ ತಜ್ಞರಾದ ಡಾ.ವೀಣಾಪರಮೇಶ್ ಮಾತನಾಡಿ "ಬಿಪಿ, ಶುಗರ್ ನಿಯಂತ್ರಣ ಸೇರಿದಂತೆ ಸರಿಯಾದ ಆಹಾರ ಕ್ರಮ ಹಾಗೂ ಜೀವನ ಶೈಲಿಯಿಂದ ಕಣ್ಣಿನ ಸಮಸ್ಯೆಗಳಿಂದ ದೂರವಿರಬಹುದು" ಎಂದು ಸಲಹೆ ನೀಡಿದರು.ಸಿದ್ಧಗಂಗಾ ಮೆಡಿಕಲ್ ಕಾಲೇಜು ಮೇಲ್ವಿಚಾರಕ ಡಾ.ನಿರಂಜನಮೂರ್ತಿ ಹಾಗೂ ಶಸ್ತ್ರಚಿಕಿತ್ಸೆಗೆ ಒಳಗಾಗದ ರೋಗಿಗಳು ಉಪಸ್ಥಿತರಿದ್ದರು.

* * *

## ಉಚಿತ ಆರೋಗ್ಯ ಶಿಬಿರಗಳು:

ತುಮಕೂರು ವಿಶ್ವವಿದ್ಯಾಲಯ ಹಾಗೂ ಸಿದ್ಧಗಂಗಾ ಆಸ್ಪತ್ರೆ ಸಹಯೋಗದಲ್ಲಿ ಸ್ನಾತಕೋತ್ತರ ಸಮಾಜಕಾರ್ಯ ಅಧ್ಯಯನ ಸಂಶೋಧನಾ ವಿಭಾಗದ ವತಿಯಿಂದ ಕುಂದೂರಿನಲ್ಲಿ ನಡೆದ ಸಮಾಜಕಾರ್ಯ ಗ್ರಾಮೀಣ ಶಿಬರವನ್ನು ಸಿದ್ಧಗಂಗಾ ಆಸ್ಪತ್ರೆ ನಿರ್ದೇಶಕರಾದ ಡಾ.ಎಸ್.ಪರಮೇಶ್ ಉದ್ಘಾಟಿಸಿದರು. ವೈದ್ಯರಾದ ಡಾ.ಸುಮಾ, ಡಾ.ದುಶ್ಯಂತ್, ಡಾ.ಪ್ರದೀಪ್, ಪಿಆರ್‌ಓ ಶ್ರೀ ಕಾಂತರಾಜು, ಉಪನ್ಯಾಸಕರಾದ ಅನುಷಾ ಜೈನ್ ಉಪಸ್ಥಿತರಿದ್ದರು. ಗ್ರಾಮದ ಸುಮಾರು ೨೦೦ ಜನರಿಗೆ ಆರೋಗ್ಯ ತಪಾಸಣೆ ನಡೆಸಲಾಯಿತು.

* * *

ಪಾವಗಡದ ತಿರುಮಣಿ ಸರ್ಕಾರಿ ಪ್ರೌಢಶಾಲೆ ಹಳೆ ವಿದ್ಯಾರ್ಥಿಗಳ ಮಧುರ ಸ್ನೇಹ ಮಿಲನ ಕಾರ್ಯಕ್ರಮದ ಅಂಗವಾಗಿ ಸಿದ್ದಗಂಗಾ ಆಸ್ಪತ್ರೆ ವತಿಯಿಂದ ಪೂರ್ಣ ಪ್ರಮಾಣದ ಉಚಿತ ಆರೋಗ್ಯ ತಪಾಸಣಾ ಶಿಬಿರ ನಡೆಯಿತು. ಸುಮಾರು ೧೫೦ಕ್ಕೂ ಹೆಚ್ಚು ವಿದ್ಯಾರ್ಥಿಗಳು ಹಾಗೂ ಸಾರ್ವಜನಿಕರಿಗೆ ಸಿದ್ದಗಂಗಾ ಆಸ್ಪತ್ರೆಯ ವೈದ್ಯರು ಉಚಿತ ಆರೋಗ್ಯ ತಪಾಸಣೆ ನಡೆಸಿದರು. ಕಾರ್ಯಕ್ರಮದಲ್ಲಿ ಡಾ.ರವಿಚಂದ್ರ, ಡಾ.ಆದಿತ್ಯ ಡಾ.ದರ್ಶನ್, ಡಾ.ಮಧುಸೂದನ್, ಡಾ.ಪ್ರದೀಪ್ ಹಾಗೂ ಪಿಆರ್‌ಓ ಶ್ರೀ ಕಾಂತರಾಜು ಉಪಸ್ಥಿತರಿದ್ದರು.

* * *

ಸಿದ್ಧಗಂಗಾ ವೈದ್ಯಕೀಯ ಮಹಾವಿದ್ಯಾಲಯ ಹಾಗೂ ಸಂಶೋಧನಾ ಸಂಸ್ಥೆ, ಜಿಲ್ಲಾಡಳಿತ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಚೇರಿ, ಜಿಲ್ಲಾಪಂಚಾಯತ್ ಸಹಯೋಗದಲ್ಲಿ ಹೆಪಟೈಟಿಸ್ ದಿನಾಚರಣೆ ನಡೆಯಿತು. ಕಾರ್ಯಕ್ರಮವನ್ನು ಡಿಹೆಚ್‌ಓ ಡಾ.ಮಂಜುನಾಥ್ ರವರು ಉದ್ಘಾಟಿಸಿ ಹೆಪಟೈಟಿಸ್ ನಿಯಂತ್ರಣ ಹಾಗೂ ಜಾಗೃತಿ ಕುರಿತು ಮಾಹಿತಿ ನೀಡಿದರು. ಸಿದ್ಧಗಂಗಾ ಮೆಡಿಕಲ್ ಕಾಲೇಜು ಪ್ರಾಚಾರ್ಯರಾದ ಡಾ.ಶಾಲಿನಿರವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿ "ಆರೋಗ್ಯ ಜಾಗೃತಿಗಾಗಿ ಜಿಲ್ಲಾಡಳಿತ ಹಾಗೂ ಆರೋಗ್ಯ ಇಲಾಖೆಗಳು ನೀಡುತ್ತಿರುವ ಸಹಕಾರಕ್ಕೆ ಧನ್ಯವಾದ" ತಿಳಿಸಿದರು.

ಜಿಲ್ಲಾ ಕ್ಷಯರೋಗ ನಿಯಂತ್ರಣಾಧಿಕಾರಿ ಡಾ.ಸನತ್, ಸೂಪರ್ ಸ್ಪೆಷಾಲಿಟಿ ವಿಭಾಗದ ಮುಖ್ಯಸ್ಥರಾದ ಡಾ.ಭಾನುಪ್ರಕಾಶ್, ಮೆಡಿಕಲ್ ಮೇಲ್ವಿಚಾರಕ ಡಾ.ನಿರಂಜನಮೂರ್ತಿ, ಮಲೇರಿಯಾ ನಿಯಂತ್ರಣಾಧಿಕಾರಿ ಚಂದ್ರಶೇಖರ್, ಗ್ಯಾಸ್ಟ್ರೋಎಂಟರಾಲಜಿಸ್ಟ್ ಡಾ.ವಿನೋದ್ ಗೌಡ, ಆಸ್ಪತ್ರೆ ಸಿಇಓ ಡಾ.ಸಂಜೀವಕುಮಾರ್ ಉಪಸ್ಥಿತರಿದ್ದರು.

* * *





## ೭೭ ನೇ ಸ್ವಾತಂತ್ರ್ಯ ದಿನಾಚರಣೆ

ಸಿದ್ಧಗಂಗಾ ಆಸ್ಪತ್ರೆಯಲ್ಲಿ ನಡೆದ ೭೭ ನೇ ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ ದ್ವಜಾರೋಹಣ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ಸಿದ್ಧಗಂಗಾ ವೈದ್ಯಕೀಯ ಕಾಲೇಜು ಹಾಗೂ ಸಂಶೋಧನಾ ಸಂಸ್ಥೆಯ ಕಾರ್ಯನಿರ್ವಾಹಕ ನಿರ್ದೇಶಕ ಡಾ.ಸಚ್ಚಿದಾನಂದ್ ದ್ವಜಾರೋಹಣ ನೆರವೇರಿಸಿ ಮಾತನಾಡಿ "ಸ್ವತಂತ್ರ ಭಾರತ ಎಲ್ಲಾ ರಂಗದಲ್ಲಿಯೂ ಸದೃಢ ಹೆಜ್ಜೆ ಇಡುತ್ತಾ ಸಾಗುತ್ತಿದ್ದು ವೈದ್ಯಕೀಯ, ತಂತ್ರಜ್ಞಾನ, ಆರ್ಥಿಕ ಹಾಗೂ ತಂತ್ರಜ್ಞಾನ ಕ್ಷೇತ್ರದಲ್ಲಿ ಸಾಗಿರುವ ಮೈಲಿಗಲ್ಲುಗಳು ನಮ್ಮ ಆತ್ಮಾಭಿಮಾನ ಹೆಚ್ಚಿಸಿದೆ" ತಿಳಿಸಿದರು.

ಭಾರತವನ್ನು ಮತ್ತಷ್ಟು ವೇಗದಲ್ಲಿ ಸಾಗುವಂತೆ ಮಾಡಲು ನಾವೆಲ್ಲರೂ ನಮ್ಮ ನಮ್ಮ ಕ್ಷೇತ್ರಗಳಲ್ಲಿ ಪರಿಣಿತಿ ಸಾಧಿಸಿ ದೇಶದ ಏಳಿಗೆಯಲ್ಲಿ ಪಾಲ್ಗೊಳ್ಳಬೇಕು ಎಂದರು. ಮೆಡಿಕಲ್ ಕಾಲೇಜು ಪ್ರಾಚಾರ್ಯರಾದ ಡಾ.ಶಾಲಿನಿಯವರು ಮಾತನಾಡಿ "ನಾವು ದೇಶಕ್ಕಾಗಿ ಬಲಿದಾನ ಕೊಟ್ಟವರ ಆತ್ಮಚರಿತ್ರೆಯನ್ನು ತಿಳಿದುಕೊಳ್ಳಬೇಕು. ಭವ್ಯ ಭಾರತದ ಶ್ರೇಷ್ಠತೆಯನ್ನು ಆಚರಿಸುವುದರ ಜೊತೆಗೆ ದೇಶವನ್ನು ಏಕತೆಯಿಂದ ಕಟ್ಟುವ ಪ್ರತಿಜ್ಞೆ ಮಾಡಬೇಕು" ಎಂದರು.

ಮೆಡಿಕಲ್ ಸೂಪರಿಂಟೆಂಡೆಂಟ್ ಡಾ.ನಿರಂಜನಮೂರ್ತಿ ಮಾತನಾಡಿ "ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಶ್ರೀಗಳು ತ್ರಿವಿಧ ದಾಸೋಹದ ಮೂಲಕ ದೇಶಕ್ಕೆ ಉತ್ತಮ ಪ್ರಜೆಗಳನ್ನು ನೀಡುವ ಮೇಲ್ಪಂಕ್ತಿ ಹಾಕಿಕೊಟ್ಟವರು. ಅವರ ದೇಶಪ್ರೇಮದ ದಾರಿಯಲ್ಲಿ ನಾವೂ ನಡೆಯಬೇಕು" ಎಂದು ಕರೆನೀಡಿದರು.

ವೈದ್ಯಕೀಯ ಹಾಗೂ ಅರೆ ವೈದ್ಯಕೀಯ ವಿದ್ಯಾರ್ಥಿಗಳು ದೇಶಪ್ರೇಮ ಸಾರುವ ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿಕೊಟ್ಟರು. ಆಸ್ಪತ್ರೆ ಸ್ಪೆಷಾಲಿಟಿ ಹಾಗೂ ಸೂಪರ್ ಸ್ಪೆಷಾಲಿಟಿ ವೈದ್ಯರು ಉಪಸ್ಥಿತರಿದ್ದರು.

**ವರದಿ: ಪಿಆರ್‌ಓ ಕಾಂತರಾಜು**



ಆಗಸ್ಟ್ ೧೦ ರಂದು, ಪಾಂಡವಪುರ ತಾಲ್ಲೂಕಿನ ಬೇಬಿ ಬೆಟ್ಟದ ಶ್ರೀಕ್ಷೇತ್ರ ರಾಮಯೋಗೀಶ್ವರ ಮಠದ ಪರಮಪೂಜ್ಯ ಲಿಂ. ಶ್ರೀ ಶ್ರೀ ಮರಿದೇವರು ಶಿವಯೋಗಿಗಳವರ ೧೫ನೇ ವರ್ಷದ ಪುಣ್ಯಸ್ಮರಣೆ, ಪರಮಪೂಜ್ಯ ಶ್ರೀ ಶ್ರೀ ಸದಾಶಿವ ಮಹಾಸ್ವಾಮಿಗಳವರ ೫ನೇ ವರ್ಷದ ಪುಣ್ಯಸ್ಮರಣೆ, ಪೂಜ್ಯರ ಗದ್ದುಗೆ ಲೋಕಾರ್ಪಣೆ ಹಾಗೂ ಬಸವ ಜಯಂತಿ ಕಾರ್ಯಕ್ರಮ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಶ್ರೀ ದೇಗುಲಮಠದ ಪೂಜ್ಯ ಶ್ರೀ ಶ್ರೀ ಚೆನ್ನಬಸವ ಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ, ಬೇಬಿಮಠದ ಪೂಜ್ಯ ಶ್ರೀ ಶ್ರೀ ಶಿವಬಸವ ಸ್ವಾಮಿಗಳವರ ಉಪಸ್ಥಿತಿಯಲ್ಲಿ ನಡೆಯಿತು. ಸಮಾರಂಭವನ್ನು ಮೈಸೂರು ರಾಜವಂಶಸ್ಥರಾದ ಶ್ರೀಮಾನ್ ಯದುವೀರ ಕೃಷ್ಣದತ್ತ ಜಯಚಾಮರಾಜ ಒಡೆಯರ್ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಗಣ್ಯರು, ಭಕ್ತರು ಉಪಸ್ಥಿತರಿದ್ದರು.





ಕ್ಷೇತ್ರವಾರ್ತೆ

# ಶ್ರೀಮಠದಲ್ಲಿ ಸಂಭ್ರಮದಿಂದ ೭೭ನೇ ಸ್ವಾತಂತ್ರ್ಯೋತ್ಸವ ಆಚರಣೆ



ಆಗಸ್ಟ್ ೧೫ ರಂದು, ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ೭೭ನೇ ಸ್ವಾತಂತ್ರ್ಯ ದಿನಾಚರಣೆಯನ್ನು ಸಂತೋಷ, ಸಡಗರದಿಂದ ಆಚರಿಸಲಾಯಿತು. ಗೃಹಸಚಿವ ಹಾಗೂ ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರಾದ ಡಾ. ಜಿ.ಪರಮೇಶ್ವರ್ ಅವರು ಧ್ವಜಾವರೋಹಣ ನೆರವೇರಿಸಿದರು.

ಈ ಸಂದರ್ಭದಲ್ಲಿ ಮಾತನಾಡಿದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು "ಹಲವು ಮಹನೀಯರ ತ್ಯಾಗ, ಬಲಿದಾನಗಳಿಂದಾಗಿ ದೇಶಕ್ಕೆ ಸ್ವಾತಂತ್ರ್ಯ ದೊರಕಿದೆ. ಯುವ ಜನತೆ ಆದರ್ಶ ಮೌಲ್ಯಗಳನ್ನು, ಜೀವನ ಸಿದ್ಧಾಂತಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಮಾದರಿ ದೇಶ ನಿರ್ಮಾಣಕ್ಕೆ ಮುಂದಾಗಬೇಕಿದೆ" ಎಂದು ಕರೆ ನೀಡಿದರು.

ಗೃಹಸಚಿವ ಡಾ. ಜಿ.ಪರಮೇಶ್ವರ್ ಅವರು ಮಾತನಾಡಿ "ಸಿದ್ಧಗಂಗಾ ಮಠದಲ್ಲಿ ಸಹಸ್ರಾರು ವಿದ್ಯಾರ್ಥಿಗಳು ಒಂದೆಡೆ ಸೇರಿ ಸ್ವಾತಂತ್ರ್ಯದ ದಿನಾಚರಣೆಯನ್ನು ಹಬ್ಬದಂತೆ ಆಚರಿಸುವುದನ್ನು ನೋಡಲು ಸಂತೋಷವಾಗುತ್ತದೆ. ಶ್ರೀಮಠ ಸುಸಂಸ್ಕೃತ ದೇಶ ನಿರ್ಮಾಣಕ್ಕೆ ಸಾಕಷ್ಟು ಉತ್ತಮ ಕೊಡುಗೆ ನೀಡುತ್ತಿದೆ" ಎಂದು ಹೇಳಿದರು. ಈ ಸಂದರ್ಭದಲ್ಲಿ ತುಮಕೂರು ನಗರ ಶಾಸಕರಾದ ಶ್ರೀ ಜಿ.ಬಿ.ಜ್ಯೋತಿಗಣೇಶ್, ತುಮಕೂರು ಗ್ರಾಮಾಂತರ ಶಾಸಕರಾದ ಶ್ರೀ ಬಿ.ಸುರೇಶ್‌ಗೌಡ, ತುಮಕೂರು ಜಿಲ್ಲಾಧಿಕಾರಿಗಳಾದ ಶ್ರೀ ಶ್ರೀನಿವಾಸ, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ರಾಹುಲ್‌ಕುಮಾರ್ ಶಹಾಪುರ್‌ವಾಡ್, ಜಿಲ್ಲಾ ಪಂಚಾಯತ್ ಮುಖ್ಯಕಾರ್ಯನಿರ್ವಹಣಾಧಿಕಾರಿ ಶ್ರೀ ಪ್ರಭು, ತಹಸೀಲ್ದಾರ್ ಶ್ರೀ ಸಿದ್ಧೇಶ್ ಸೇರಿದಂತೆ ವಿವಿಧ ಜನಪ್ರತಿನಿಧಿಗಳು ಶ್ರೀಮಠದ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿ ಉಪಸ್ಥಿತರಿದ್ದರು. ಈ ಭವ್ಯ ಸಮಾರಂಭ ಸಂಭ್ರಮದಲ್ಲಿ ಶ್ರೀಮಠದ ಹತ್ತು ಸಾವಿರ ವಿದ್ಯಾರ್ಥಿಗಳು ಭಾಗವಹಿಸಿ ರಾಷ್ಟ್ರ ಪ್ರೇಮವನ್ನು ಮೆರೆದರು.

ದಿನಾಂಕ ೧೪ರ ಸಂಜೆ ಶ್ರೀಮಠದಲ್ಲಿ ಸಾಮೂಹಿಕ ಪ್ರಾರ್ಥನೆ ಸಂದರ್ಭದಲ್ಲಿ ಮಠದ ಆವರಣದಲ್ಲಿ ೧೦೦ ಅಡಿ ಬೃಹತ್ ತ್ರಿವರ್ಣ ಧ್ವಜವನ್ನು ಪ್ರದರ್ಶಿಸುವ ಮೂಲಕ ಮಠದ ವಿದ್ಯಾರ್ಥಿಗಳು ರಾಷ್ಟ್ರಭಕ್ತಿ ಮೆರೆದರು. ಈ ಅಪೂರ್ವ ಸನ್ನಿವೇಶಕ್ಕೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಜಿಲ್ಲಾಧಿಕಾರಿ ಶ್ರೀ ಶ್ರೀನಿವಾಸ್, ಜಿ.ಪಂ. ಸಿಇಓ ಶ್ರೀ ಜಿ.ಪ್ರಭು, ಆಯುಕ್ತೆ ಬಿ.ಎ. ಅಶ್ವಿಜ, ಎಡಿಸಿ ಶ್ರೀ ಶಿವಾನಂದ ಕರಾಳೆ, ಸಹಾಯಕ ಕಮೀಷನರ್ ಶ್ರೀ ಗೌರವಕುಮಾರ್ ಶೆಟ್ಟಿ, ತಹಸೀಲ್ದಾರ್ ಶ್ರೀ ಸಿದ್ಧೇಶ್ ಅವರು ಸಾಕ್ಷಿಯಾದರು.







ವರದಿ :

# ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದ ಶೈಕ್ಷಣಿಕ ಜಾಗೃತಿ ಪ್ರಚಾರ ಆಂದೋಲನ ವಾಹನಕ್ಕೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಚಾಲನೆ



ಆಗಸ್ಟ್ ೪ ರಂದು, ತುಮಕೂರಿನಲ್ಲಿ ಏರ್ಪಡಿಸಿದ್ದ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ಶೈಕ್ಷಣಿಕ ಜಾಗೃತ ಪ್ರಚಾರ ಆಂದೋಲನ ವಾಹನಕ್ಕೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಚಾಲನೆ ನೀಡಿ "ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವು ವಿವಿಧ ಕಾರಣಗಳಿಂದ ಉನ್ನತ ಶಿಕ್ಷಣದಿಂದ ವಂಚಿತರಾದ ಸಮಾಜದ ವಿವಿಧ ವರ್ಗದ ಜನರಿಗೆ ವಿದ್ಯಾಭ್ಯಾಸ ಮುಂದುವರಿಸಲು ಉದ್ಯೋಗಸ್ಥ ಜನರಿಗೆ, ಅಂಗವಿಕಲರಿಗೆ, ಮಹಿಳೆಯರಿಗೆ ಜ್ಞಾನಾರ್ಜನೆ ಬಯಸುವ ಜನರಿಗೆ ಮನೆಬಾಗಿಲಿಗೆ ಕಡಿಮೆ ಶೈಕ್ಷಣಿಕ ವೆಚ್ಚದಲ್ಲಿ ಉತ್ತಮ ಶಿಕ್ಷಣ ನೀಡಲು ಶ್ರಮಿಸುತ್ತಿದ್ದು, ಈ ಸುವರ್ಣಾವಕಾಶವನ್ನು ತುಮಕೂರು ಜಿಲ್ಲಾ ವ್ಯಾಪ್ತಿಯ ಉದ್ಯೋಗಾಕಾಂಕ್ಷಿಗಳು ಮತ್ತು ವಿದ್ಯಾಸಕ್ತರು ಸದುಪಯೋಗ ಪಡಿಸಿಕೊಳ್ಳಬೇಕು. ಕೋವಿಡ್ ಕಾರಣದಿಂದ ಮರಣ ಹೊಂದಿದ ತಂದೆ, ತಾಯಿಗಳನ್ನು ಕಳೆದುಕೊಂಡು ಅನಾಥರಾದ ಮಕ್ಕಳಿಗೆ, ತೃತೀಯ ಲಿಂಗ ವಿದ್ಯಾರ್ಥಿಗಳಿಗೆ, ದೃಷ್ಟಿಹೀನ ವಿದ್ಯಾರ್ಥಿಗಳಿಗೆ ಈ ಸಂಸ್ಥೆ ಉಚಿತ ಪ್ರವೇಶ ನೀಡುತ್ತಿದ್ದು ಈ ಸುಸಂದರ್ಭವನ್ನು ಬಳಸಿಕೊಳ್ಳಬೇಕು" ಎಂದು ಕರೆ ನೀಡಿದರು.

ತುಮಕೂರಿನ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ಪ್ರಾದೇಶಿಕ ಕೇಂದ್ರದ ನಿರ್ದೇಶಕರಾದ ಡಾ. ಆರ್.ಲೋಕೇಶ್ ಅವರು ಮಾತನಾಡಿ "ಕರಾಮುವಿಯ ಪದವಿಗಳು ಯುಜಿಸಿ ನಿಯಮಾವಳಿ ಪ್ರಕಾರ ಭೌತಿಕ ಶಿಕ್ಷಣ ಪದವಿಗೆ ಸಮನಾದ ಅರ್ಹತೆ ಹೊಂದಿದ್ದು, ಈ ಸಂಸ್ಥೆ ನೀಡುತ್ತಿರುವ ಶಿಕ್ಷಣ ಕ್ರಮಗಳಿಗೆ ವಿಶ್ವವಿದ್ಯಾಲಯ ಧನಸಹಾಯ ಆಯೋಗವು (ಯುಜಿಸಿ) ಮಾನ್ಯತೆ ನೀಡಿದೆ. ನ್ಯಾಕ್‌ನಿಂದ 'ಎ' ಪ್ಲಸ್ ಗ್ರೇಡ್ ಪಡೆದಿದೆ" ಎಂದು ತಿಳಿಸಿದರು.

ಈ ಸಂದರ್ಭದಲ್ಲಿ ಪ್ರಚಾರ ಆಂದೋಲನದ ಸಂಯೋಜಕರಾದ ಶ್ರೀ ಸಿದ್ಧೇಗೌಡ, ತುಮಕೂರು ವಿಶ್ವವಿದ್ಯಾಲಯ ವಾಣಿಜ್ಯ ಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ ಡಾ. ಪಿ.ಪರಮಶಿವಯ್ಯನವರು ಹಾಗೂ ತುಮಕೂರು ಪ್ರಾದೇಶಿಕ ಕೇಂದ್ರದ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.

# ದಾವಣಗೆರೆ ಜಿಲ್ಲಾ ಶಿವಶಿಂಪಿ ಸಮಾಜದ ವತಿಯಿಂದ ಶರಣ ಶಿವದಾಸಿಮಯ್ಯ ಜಯಂತ್ಯೋತ್ಸವ ಹಾಗೂ ಪ್ರತಿಭಾ ಪುರಸ್ಕಾರ



ಆಗಸ್ಟ್ ೧೪ ರಂದು, ದಾವಣಗೆರೆ ಜಿಲ್ಲಾ ಶಿವಶಿಂಪಿ ಸಮಾಜದ ವತಿಯಿಂದ ಏರ್ಪಡಿಸಿದ್ದ ಶರಣ ಶ್ರೀ ಶಿವದಾಸಿಮಯ್ಯ ಹಾಗೂ ಪ್ರತಿಭಾ ಪುರಸ್ಕಾರ ಸಮಾರಂಭವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿ, ತಮ್ಮ ಮಂಗಳ ನುಡಿಗಳಲ್ಲಿ "೧೨ನೇ ಶತಮಾನದಲ್ಲಿ ಬಸವಾದಿ ಶರಣರು ಹಚ್ಚಿದ ಕಿಡಿಯಲ್ಲಿ ಒಂದು ಕಿಡಿ ಶಿವಸಿಂಪಿ ಸಮಾಜದ ಶರಣ ಶಿವದಾಸಿಮಯ್ಯನವರು. ಈ ಸಮಾಜ ಕೇವಲ ಬಟ್ಟೆಗಳನ್ನು ಹೊಲೆಯುವ ಜತೆ ಎಲ್ಲಾ ಸಮಾಜಗಳನ್ನು ಬೆಸೆಯುವ ಕೆಲಸ ಮಾಡುತ್ತಾ ಬಂದಿದೆ. ಬಸವಾದಿ ಶರಣರು ಅನುಭವ ಮಂಟಪ ರಚಿಸುವ ಮೂಲಕ ನಾಡಿನ ಉದ್ದಗಲಕ್ಕೂ ಶರಣರನ್ನು ಬೆಳೆಸಿದರು. ಅವರ ಅನುಭವಗಳು ಇಂದಿಗೂ ನಮಗೆ ಮಾರ್ಗದರ್ಶನವಾಗಿವೆ. ಅಲ್ಲದೆ ಶಿವಶಿಂಪಿ ಸಮಾಜವು ಕೇವಲ ಬಟ್ಟೆಗಳನ್ನು ಹೊಲಿಯುವುದು ಮಾತ್ರವಲ್ಲ, ಸಮಾಜಗಳ ಮನಸ್ಸನ್ನು ಹೊಲಿಯುವ ಕೆಲಸ ಮಾಡುತ್ತಿವೆ. ಆಚಾರ, ವಿಚಾರ, ವಸ್ತುನಿಷ್ಠೆ, ಶಿಸ್ತುಬದ್ಧ ವಿಚಾರಗಳ ಜೊತೆಗೆ ಶರಣರ ಮಾರ್ಗದರ್ಶನವನ್ನು ಮೈಗೂಡಿಸಿಕೊಂಡು ಜೀವನ ಸಾಗಿಸುತ್ತಿದೆ. ಶರಣರ ಆದರ್ಶಗಳು ನಮಗೆ ಇಂದಿಗೂ ಪ್ರಸ್ತುತ ಜೀವನದಲ್ಲಿ ಜ್ಞಾನದ ಮಹತ್ವವನ್ನು ಅರಿತುಕೊಂಡು ಕೆಲಸ ಮಾಡಬೇಕಾಗಿದೆ. ಪೋಷಕರು ಕೇವಲ ತಮ್ಮ ಮಕ್ಕಳನ್ನು ಪ್ರತಿಭಾವಂತರನ್ನಾಗಿ ಮಾಡದೆ ಗುಣವಂತರನ್ನಾಗಿ ಮಾಡುವ ಜೊತೆ ಜೊತೆಯಲ್ಲಿ ಮಾನವೀಯ ಮೌಲ್ಯಗಳನ್ನು ಬೆಳೆಸಿ ದೇಶ ಸಂಪತ್ಭರಿತವಾಗುವಂತೆ ಮಾಡಬೇಕಾಗಿದೆ" ಎಂದು ಹೇಳಿದರು.




ಸಮಾರಂಭದ ಅಧ್ಯಕ್ಷತೆಯನ್ನು ಸಮಾಜದ ಅಧ್ಯಕ್ಷರಾದ ಶ್ರೀ ಬೂಸ್ನೂರು ಗುರುಬಸಪ್ಪ ವಹಿಸಿದ್ದರು. ಸಾನ್ನಿಧ್ಯವನ್ನು ಶ್ರೀ ಬಸವಪ್ರಭು ಸ್ವಾಮಿಗಳವರು ವಹಿಸಿದ್ದರು. ಸಮಾಜದ ಗೌರವಾಧ್ಯಕ್ಷರಾದ ಶ್ರೀ ಸಿ.ಎಲ್. ಚಂದ್ರಧರ, ಡಾ.ಎಂ. ಕೊಟ್ರೇಶ್, ಪ್ರಧಾನ ಕಾರ್ಯದರ್ಶಿ ಶ್ರೀ ಬೂಸ್ನೂರು ಪ್ರಕಾಶ್, ಸಹ ಕಾರ್ಯದರ್ಶಿ ಶ್ರೀ ಜ್ಞಾನೇಶ್ವರ ಜವಳಿ ಹಾಗೂ ಸಮಾಜದ ಗಣ್ಯರು ಉಪಸ್ಥಿತರಿದ್ದರು.



ವರದಿ :

# ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ತೋಟಗೆರೆ ಶ್ರೀ ಬಸವೇಶ್ವರ ಗ್ರಾಮಾಂತರ ಪ್ರೌಢಶಾಲೆ ಆಯೋಜಿಸಿದ್ದ ವಿವಿಧ ಕಾರ್ಯಕ್ರಮಗಳ ಉದ್ಘಾಟನೆ

ಬೆಂಗಳೂರು ನಗರ ಜಿಲ್ಲೆ, ದಾಸನಪುರ ಹೋಬಳಿ, ತೋಟಗೆರೆ ಶ್ರೀ ಬಸವೇಶ್ವರ ಗ್ರಾಮಾಂತರ ಪ್ರೌಢಶಾಲೆಯಲ್ಲಿ ವಿದ್ಯಾರ್ಥಿ ಸಂಘದ ಚಟುವಟಿಕೆಗಳ ಉದ್ಘಾಟನೆ, ಪ್ರತಿಭಾ ಪುರಸ್ಕಾರ, ವಿದ್ಯಾರ್ಥಿಗಳಿಗೆ ಗುರುತಿನ ಚೀಟಿ, ಶಾಲಾ ದ್ವಾರಬಾಗಿಲಿನ ನಾಮಫಲಕ ಹಾಗೂ ನೂತನ ಪ್ರಾರ್ಥನಾ ಸಭಾಂಗಣದ ಅನಾವರಣ, ಸಾಧಕರಿಗೆ ಪ್ರಶಸ್ತಿಗಳ ಪುರಸ್ಕಾರ, ಶಾಲೆಯ ದಾನಿಗಳಿಗೆ ಸನ್ಮಾನ ಸಮಾರಂಭವು ದಿನಾಂಕ ೨೮-೦೬-೨೦೨೩ರ ಗುರುವಾರ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಅರ್ಥಪೂರ್ಣವಾಗಿ ನಡೆಯಿತು.

ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀಶ್ರೀಗಳವರು ಆಶೀರ್ವಚನ ನೀಡುತ್ತಾ "ಈ ಸಮಾರಂಭ ಅರ್ಥಪೂರ್ಣವಾಗಿದೆ. ನಮ್ಮ ಗುರುಗಳ ದಿವ್ಯಸಂಕಲ್ಪದಿಂದ ಸಮಾಜ ಬಂಧುಗಳು, ದಾನಿಗಳು, ಜನಪ್ರತಿನಿಧಿಗಳ ಸಹಕಾರದಿಂದ ಈ ಶಾಲೆಯು ಗುಣಮಟ್ಟದ ಶಿಕ್ಷಣ ನೀಡುತ್ತಿದೆ. ಮುಖ್ಯಶಿಕ್ಷಕರಾದ ಶ್ರೀ ಕೆ.ಬಿ. ಶಿವಶಂಕರಯ್ಯನವರ ಸೇವಾವಧಿ ಕಡಿಮೆಯಾದರೂ ಕ್ರಿಯಾಶೀಲರಾಗಿ ಶಾಲಾ ಸಿಬ್ಬಂದಿಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ಉತ್ತಮ ಕೆಲಸ ಮಾಡುತ್ತಿದ್ದಾರೆ. ಇನ್ನೂ ನಾಲ್ಕಾರು ವರ್ಷ ಇದ್ದರೆ ಶಾಲಾ ಚಿತ್ರಣವೇ ಬದಲಾಗುತ್ತಿತ್ತು. ನಿವೃತ್ತರಾದರೂ ಈ ಶಾಲೆಯ ಅಭಿವೃದ್ಧಿಗೆ ಅವರ ಸೇವೆ ನಿರಂತರವಾಗಿರಲಿ" ಎಂದು ನುಡಿದರು.

ಶಾಲಾ ಸ್ಥಳ ದಾನಿಗಳಾದ ಗುಡ್ಡದಹಳ್ಳಿ ಶ್ರೀ ಬಸಪ್ಪನವರು, ಶಾಲಾ ಕಟ್ಟಡ ದಾನಿಗಳಾದ ಉದ್ಯಮಿ ಶ್ರೀ ಆರ್.ಬಿ.ಎಸ್. ಚನ್ನಬಸವಾರಾಧ್ಯರು, ಪ್ರಾರ್ಥನಾ ಸಭಾಂಗಣ ರಸ್ತೆ, ಕಾಂಪೌಂಡ್, ಕುಡಿಯುವ ನೀರಿನ ಟ್ಯಾಂಕ್ ನಿರ್ಮಾಣಕ್ಕೆ ಶಾಸಕರ



ಶಾಲಾ ಮುಖ್ಯ ಶಿಕ್ಷಕರಾದ ಶ್ರೀ ಕೆ.ಬಿ.ಶಿವಶಂಕರಯ್ಯ ಮತ್ತು ಸಿಬ್ಬಂದಿ ವರ್ಗದವರು
ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಪಾದಪೂಜೆ ನೆರವೇರಿಸಿ ಭಕ್ತಿ ಸಮರ್ಪಣೆ ಮಾಡಿದರು.







ನಿಧಿಯಿಂದ ಅನುದಾನ ನೀಡಿದ ಜನಪ್ರಿಯ ಶಾಸಕರಾದ ಶ್ರೀ ಎಸ್.ಆರ್. ವಿಶ್ವನಾಥ್, ಮಾಜಿ ಸಚಿವರಾದ ಶ್ರೀ ಬಿ. ರಾಮಚಂದ್ರೇಗೌಡರು ಹಾಗೂ ಶಾಲಾ ಅಭಿವೃದ್ಧಿಗೆ ಶ್ರಮಿಸಿದ ಶ್ರೀ ಬಸವೇಗೌಡರು, ಪಟೇಲ್ ಸಿದ್ಧಗಂಗಪ್ಪ, ಶ್ರೀ ಮರಿಕೆಂಚಪ್ಪನವರು, ಶ್ರೀ ಸಿ.ಎನ್.ಆರ್. ಗ್ರೂಪ್ಸ್‌ನ ಶ್ರೀ ವಿ.ರಾಮಸ್ವಾಮಿ, ಸಮವಸ್ತ್ರದಾನಿಗಳಾದ ಹೊಸಕೋಟೆ ಶ್ರೀ ಮಹೇಶ್, ವಿದ್ಯಾರ್ಥಿಗಳ ಗುರುತಿನ ಚೀಟಿ ದಾನಿಗಳಾದ ಶ್ರೀ ಎಸ್.ಹರೀಶ್‌ಕುಮಾರ್, ನಾಮಫಲಕ ದಾನಿಗಳಾದ ಡಾ. ಕೆ.ವಿ.ಶಿವಾನಂದಮೂರ್ತಿ, ಡಾ. ಗೋವಿಂದರಾಜ್ ಹೀಗೆ ಹಲವು ಮಹನೀಯರ ಸೇವೆ ಅತ್ಯಂತ ಸ್ಮರಣೀಯವಾದುದು" ಎಂದು ಶ್ಲಾಘಿಸಿದರು.

ಪ್ರಾರ್ಥನಾ ಸಭಾಂಗಣ, ವಿದ್ಯಾರ್ಥಿ ಸಂಘವನ್ನು ಉದ್ಘಾಟಿಸಿದ ಶಾಸಕರಾದ ಶ್ರೀ ಎಸ್.ಆರ್. ವಿಶ್ವನಾಥ್‌ರವರು ಮಾತನಾಡುತ್ತ "ಶಿಕ್ಷಣ, ಸಂಸ್ಕಾರ, ಸಂಸ್ಕೃತಿ, ಮಾನವೀಯ ಮೌಲ್ಯಗಳ ಉಳಿವು, ಬೆಳವಣಿಗೆಗೆ ಮಠಗಳ ಪಾತ್ರ ಪ್ರಮುಖವಾದುದು. ಶ್ರೀ ಸಿದ್ಧಗಂಗಾಮಠ ತ್ರಿವಿಧ ದಾಸೋಹದ ಮೂಲಕ ಎಲ್ಲಾ ಮಠಗಳಿಗೆ ಮಾರ್ಗದರ್ಶಿಯಾಗಿದೆ. ಲಿಂ. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಹಾದಿಯಲ್ಲಿ ಯಾವುದಕ್ಕೂ ಚ್ಯುತಿ ಬಾರದ ರೀತಿಯಲ್ಲಿ ಈಗಿನ ಅಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಶ್ರೀಮಠವನ್ನು ಮುನ್ನಡೆಸುತ್ತಿದ್ದಾರೆ. ಈ ಶಾಲೆಗೆ ಅಳಿಲು ಸೇವೆ ಮಾಡುವ ಅವಕಾಶ ಸಿಕ್ಕಿದ್ದು ನನ್ನ ಸುದೈವ" ಎಂದು ನುಡಿದರು.

ಈ ಸಂದರ್ಭದಲ್ಲಿ ಶಾಲೆಗೆ ಸುಂದರವಾದ ಕಲ್ಲಿನ ಕಟ್ಟಡ ನಿರ್ಮಿಸಿ ಮಕ್ಕಳ ಶಿಕ್ಷಣಕ್ಕೆ ಅಮೂಲ್ಯ ಕೊಡುಗೆ ನೀಡಿದ ಉದ್ಯಮಿ ಶ್ರೀ ಆರ್.ಬಿ.ಎಸ್.ಚನ್ನಬಸವಾರಾಧ್ಯ ಅವರು ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ **'ಬಸವರತ್ನ'** ಪ್ರಶಸ್ತಿಯನ್ನು ಪರಮಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ನೀಡಿ ಗೌರವಿಸಿದರು. ಶಾಲೆಯ ಕಾಂಪೌಂಡ್ ನಿರ್ಮಾಣ ಮಾಡಿಕೊಟ್ಟ ದಾನಿಗಳಾದ ಶ್ರೀ ಬಸವೇಗೌಡರು ಇವರಿಗೆ **'ಬಸವ ವಿಭೂಷಣ'** ಪ್ರಶಸ್ತಿ, ಸಿ.ಎನ್.ಆರ್. ಗ್ರೂಪ್ಸ್‌ನ ಮಾಲೀಕರಾದ ಶ್ರೀ ವಿ. ರಾಮಸ್ವಾಮಿಯವರ ಸಾಮಾಜಿಕ ಸೇವೆಯನ್ನು ಗುರುತಿಸಿ **'ಬಸವ ಭೂಷಣ'** ಪ್ರಶಸ್ತಿ, ಶಾಲೆಯ ೧೬೦ ಮಕ್ಕಳಿಗೆ ಸಮವಸ್ತ್ರ ಕೊಡುಗೆ ನೀಡಿದ ಶ್ರೀ ಡಿ.ಸಿ. ಮಹೇಶ್ ಅವರಿಗೆ **'ಸಮಾಜಸೇವಾ ರತ್ನ'** ಪ್ರಶಸ್ತಿ, ಶಾಲಾ ದ್ವಾರಬಾಗಿಲಿನ ಆಕರ್ಷಕ ನಾಮಫಲಕದ ದಾನಿಗಳಾದ ಡಾ. ಶಿವಾನಂದಮೂರ್ತಿ ಅವರನ್ನು ಶೈಕ್ಷಣಿಕ, ಸಾಮಾಜಿಕ ಸೇವೆ ಪರಿಗಣಿಸಿ ಸಿದ್ಧಗಂಗಾ **'ಶಿಕ್ಷಣಸಿರಿ'** ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಮುಖ್ಯಶಿಕ್ಷಕರಾದ ಶ್ರೀ ಕೆ.ಬಿ. ಶಿವಶಂಕರಯ್ಯನವರು ಸ್ವಾಗತ ಹಾಗೂ ಪ್ರಾಸ್ತಾವಿಕ ಭಾಷಣ ಮಾಡಿದರು. ಶ್ರೀ ಜಿ. ಕುಮಾರಸ್ವಾಮಿಯವರು ಶರಣು ಸಮರ್ಪಣೆ ಮಾಡಿದರು. ಶ್ರೀ ರುದ್ರೇಶಯ್ಯನವರು ನಿರೂಪಣೆ ಮಾಡಿದರು.

**ವರದಿ : ಕೆ.ಬಿ. ಶಿವಶಂಕರಯ್ಯ**











"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69



To

LM-9599
Nagasree.M Librarian,
Sree Siddalingeswara B.A. Intigreted
Kannada pandith College.
Sree Siddaganga Math
**Tumkur-572104**



If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10, Ph : 23404232

email ID : geetanjaligraphics@gmail.com



ಕಾಯಕವೇ ಕೈಲಾಸ

# ಸಿದ್ಧಗಂಗಾ



ಸ್ವಾತಂತ್ರ್ಯೋತ್ಸವದ ಹಾರ್ದಿಕ ಶುಭಾಶಯಗಳು

ಸಂಪುಟ : ೫೯ ಆಗಸ್ಟ್ ೨೦೨೩ ಸಂಚಿಕೆ : ೦೮



ಜುಲೈ ೨೨ ರಂದು, ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ೬೭ನೇ ಜನ್ಮದಿನದ ಶುಭ ಸಂದರ್ಭದಲ್ಲಿ ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಶಿವಸಿದ್ಧೇಶ್ವರ ಸ್ವಾಮಿಗಳವರ ನೇತೃತ್ವದಲ್ಲಿ, ಹರಗುರು ಚರಮೂರ್ತಿಗಳ ಉಪಸ್ಥಿತಿಯಲ್ಲಿ ಪಾದಪೂಜೆ ನೇರವೇರಿಸಿ ಭಕ್ತಿಸಮರ್ಪಣೆ ಸಲ್ಲಿಸಿದರು



ಜುಲೈ ೨೨ ರಂದು, ಶ್ರೀಮಠದಲ್ಲಿ ಏರ್ಪಡಿಸಿದ್ದ ಭಾರತದ ಸರ್ವೋಚ್ಚ ನ್ಯಾಯಾಲಯದ ವಿಶ್ರಾಂತ ನ್ಯಾಯಮೂರ್ತಿ ಡಾ. ಶಿವರಾಜ ವಿ. ಪಾಟೀಲ್ ಮತ್ತು ಶ್ರೀಮತಿ ಅನ್ನಪೂರ್ಣ ಪಾಟೀಲ್‌ರವರ ವಿವಾಹ ವಜ್ರ ಮಹೋತ್ಸವದ ಅಭಿನಂದನಾ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಡಾ. ಶಿವರಾಜ ವಿ. ಪಾಟೀಲ್ ದಂಪತಿಗಳನ್ನು ಸನ್ಮಾನಿಸಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಆಟವಿ ಶಿವಲಿಂಗ ಮಹಾಸ್ವಾಮಿಗಳವರು, ಲೋಕಾಯುಕ್ತ ನ್ಯಾಯಮೂರ್ತಿ ಶ್ರೀ ಬಿ.ಎಸ್. ಪಾಟೀಲ್, ಡಾ. ಸಿ.ಸೋಮಶೇಖರ್ ಉಪಸ್ಥಿತರಿದ್ದರು.



ಜುಲೈ ೮ ರಂದು, ಶ್ರೀಮಠದಲ್ಲಿ ಸುಮಾರು ೧೦ ಕೋಟಿ ರೂ. ವೆಚ್ಚದಲ್ಲಿ ನಿರ್ಮಾಣವಾಗಲಿರುವ ವಿದ್ಯಾರ್ಥಿ ನಿಲಯದ ಕಟ್ಟಡ ಕಾಮಗಾರಿಗೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶಾಸಕರಾದ ಶ್ರೀ ಬಿ.ಸುರೇಶ್‌ಗೌಡ ಮತ್ತು ಶ್ರೀ ಜೆ.ಬಿ. ಜ್ಯೋತಿಗಣೇಶ್ ಅವರ ಸಮ್ಮುಖದಲ್ಲಿ ಗುದ್ದಲಿ ಪೂಜೆ ನೆರವೇರಿಸಲಾಯಿತು. ಇದೇ ಸಂದರ್ಭದಲ್ಲಿ ಶಾಲಾ ಕೊಠಡಿಗಳ ನಿರ್ಮಾಣ ಕಾಮಗಾರಿಗೂ ಚಾಲನೆ ನೀಡಲಾಯಿತು.